(ಮಿಂಚಿನ ಬಳ್ಳಿಯ ನಾಲ್ಕನೆಯ ಕುಡಿ)

# ಸಾಮ್ಯವಾದ



ಬರೆದವರು:

**ಕುಲಕರ್ಣಿ ರಾಮಚಂದ್ರರಾಯರು,** ಬಿ. ಎ.
**ಬುರ್ಲಿ ಬಿಂದುಮಾಧವ**



ಚಾಲುಕ್ಯ ವಿಕ್ರಮ ಶಕೆ ೮೬೪



ಮಾ. ಶು. ೧] ೧ ರೂ. [೧೯೩೮

ಮಿಂಚಿನ ಬಳ್ಳಿಯು

ಎರಡನೆಯ ವರ್ಷದ ಮೊದಲನೆಯ ಕುಡಿ

# ರಸಿಯದ ರಾಜ್ಯಕ್ರಾಂತಿ



ಬರೆದವರು:

ಸ್ವಾತಂತ್ರ್ಯಪ್ರಿಯ

ಮುದ್ರಕರು:

**ವೆಂಕಟೇಶ ಮಾಧವರಾವ ಜೋಶಿ**

ಮೋಹನ ಮುದ್ರಣಾಲಯ, ಧಾರವಾಡ

ಓಂ

# ಒಂದೆರಡು ಮಾತುಗಳು

ಮುಂದಿನ ಪುಸ್ತಕವು ಸಾಮ್ಯವಾದವೆಂದೇನೋ ಪ್ರಕಟಿಸಿದೆ. ತಾನೊಂದು ಬಗೆದರೆ ದೈವವು ಮತ್ತೊಂದು ಬಗೆಯಿತಂತೆ ಎನ್ನುವ ಹಾಗೆ ಪುಸ್ತಕ ಬರೆಯಲು ಕೈಹಾಕಿದವರು ಅಕಸ್ಮಾತ್ತಾಗಿ ಬೇನೆಬಿದ್ದರು. ಮುಂಗಾಣದಾದೆ. ಆದರೆ ಮಾಡಿದ ಸಂಕಲ್ಪವನ್ನು ಬದಲಿಸುವದು ಸರಿಕಾಣಲಿಲ್ಲ. ಸ್ವಲ್ಪ ತಡವಾದರೂ ಚಿಂತೆಯಿಲ್ಲ, ಇದನ್ನೇ ಕೊಡಬೇಕೆಂದು ಪ್ರಯತ್ನಿಸಿದೆನು. ಅದು ವಾಚಕರ ಎದುರಿಗೆ ಇದೆ. ಈ ಪುಸ್ತಕದೊಡನೆ ಈ "ಮಿಂಚಿನಬಳ್ಳಿ"ಯ ಮೊದಲನೆಯ ವರ್ಷವೂ ಮುಗಿಯಿತು.

ಈ ವಿಷಯವು ತರುಣರ ಅಂತಃಕರಣವನ್ನು ಸೆಳೆದಿದೆ. ಓದಬೇಕೆಂಬ ಲವಲವಿಕೆಯೂ ಉಂಟಾಗಿದೆ. ಆದರೆ, ಕನ್ನಡ ಸಾಹಿತ್ಯದಲ್ಲಿ ಈ ಬಗೆಯ ವಾಙ್ಮಯವು ಕಡಿಮೆ. ಅದನ್ನು ಕಡಿಮೆ ಮಾಡುವದೇ ಈ ಪ್ರಕಟನೆಯ ಉದ್ದೇಶ.

ಮಿಂಚಿನಬಳ್ಳಿಯಲ್ಲಿ ಇಂಥ ಕ್ರಾಂತಿಕಾರಕ ವಿಚಾರಗಳುಳ್ಳ ಗ್ರಂಥವು ಪ್ರಕಟವಾದದ್ದು ಕೆಲವರಿಗೆ ಆಶ್ಚರ್ಯವನ್ನುಂಟುಮಾಡಬಹುದು. ಆದರೆ, ಇಂದು ಭಾರತೀಯ ಜೀವನವು ಕ್ರಾಂತಿಯ ಮಡಲಿನಲ್ಲಿದೆ ಎಂಬುದನ್ನು ನಾವು ಮರೆಯಲಾಗದು. ಸಾಮ್ಯವಾದದ ತೆರೆಗಳೂ ಬಂದು ಅಪ್ಪಳಿಸಿವೆ. ಅದರ ಪರಿಣಾಮವೂ ಆಗಿ ಭಾರತದಲ್ಲಿ ಕಾಂಗ್ರೆಸ್ಸಿನಲ್ಲಿ ಸಾಮ್ಯವಾದೀ ಪಕ್ಷವೇ ನಿರ್ಮಾಣವಾಗಿದೆ.

ಸಾಮ್ಯವಾದದ ವಿಚಾರಗಳು ಕ್ರಾಂತಿಕಾರಕವಿವೆ ಎಂಬುದರಲ್ಲಿ ಸಂಶಯವೇ ಇಲ್ಲ. ಅವು ನಮಗೆ ಸೇರಲಿ ಸೇರದಿರಲಿ, ನಮ್ಮ ಜೀವನ-ವನ್ನು ಕದಡಿವೆ ಎಂಬ ಮಾತನ್ನು ನಾವು ಒಪ್ಪಲೇಬೇಕು.

ಇಂದಿನ ನಮ್ಮ ಜೀವನವು ಜಗತ್ತಿನ ಜೀವನದೊಡನೆ ಬೆರೆತಿದೆ. ವೈಯಕ್ತಿಕವಾಗಿ ಉಳಿದಿಲ್ಲ. ಜಗತ್ತಿನಲ್ಲಿ ನಡೆಯುವ ಪ್ರತಿಯೊಂದು ಸಂಗತಿಯೂ ನಮ್ಮ ಜೀವನದ ಮೇಲೆ ಪರಿಣಾಮವನ್ನು ಮಾಡದೆ ಬಿಡುವದಿಲ್ಲೆಂಬ ಸಂಗತಿಯನ್ನು ನಾವು ತಿಳಿದುಕೊಳ್ಳಬೇಕು. ಅದರಂ

ತೆಯೇ ನಮ್ಮ ಜೀವನವನ್ನು ರೂಪಗೊಳಿಸಿ, ಹೋರಾಡಲು ಸಿದ್ಧರಾಗಬೇಕು. ಇಲ್ಲದಿದ್ದರೆ, ಇಂದಿನ ಜಗತ್ತಿನಲ್ಲಿ ನಮಗೆ ಸ್ಥಾನವಿಲ್ಲ. ಆದುದರಿಂದ ಯಾವ ಕ್ರಾಂತಿಕಾರಕ ವಿಚಾರಗಳಿಗೂ ನಾವು ಬೆದರುವ ಕಾರಣವಿಲ್ಲ.

ಈ ಗ್ರಂಥದಲ್ಲಿ ಸಾಮ್ಯವಾದವು ಪ್ರತಿಪಾದಿಸಲ್ಪಟ್ಟಿದೆ. ವಿಚಾರಗಳು ಅತ್ಯಂತ ಕ್ರಾಂತಿಕಾರಕವಿವೆ. ಅವುಗಳನ್ನು ಪೂರ್ಣವಾಗಿ ವಿಮರ್ಶಿಸಿ ತಿಳಿದುಕೊಳ್ಳುವದು ಅವಶ್ಯವಿದೆ. ಕನ್ನಡ ತರುಣರು ಅವುಗಳನ್ನು ತಿಳಿದುಕೊಳ್ಳಬೇಕು; ಆಳವಾಗಿ ವಿಚಾರ ಮಾಡಬೇಕು. ನಮ್ಮ ಜೀವನಕ್ಕೆ ಸರಿಹೋಗುತ್ತವೆಯೋ ಇಲ್ಲವೋ ನೋಡಬೇಕು. ಅವಶ್ಯವೇ ಎನಿಸಿದರೆ ನಮ್ಮ ಜೀವನಕ್ಕೆ ಸರಿಹೋಗುವಂತೆ ಆ ತತ್ವಗಳಿಗೆ ಭಾರತೀಯ ಸಂಸ್ಕಾರಗೊಳಿಸಬೇಕೆಂದೇ ನನ್ನ ಬಯಕೆ.

ಸ್ವತಃ ನನಗೆ ಸಮ್ಮತವಿರಲಿ, ಇಲ್ಲದಿರಲಿ, ನಮ್ಮ ಜೀವನದ ಮೇಲೆ ಪರಿಣಾಮವನ್ನು ಮಾಡುವ ಎಲ್ಲ ವಿಚಾರಗಳನ್ನು ಜನಾಂಗದ ಮುಂದೆ ಇಟ್ಟು ಅವರಲ್ಲಿ ವಿಚಾರಕ್ರಾಂತಿಯನ್ನು ಮಾಡುವದೇ ಮಿಂಚಿನಬಳ್ಳಿಯ ಧ್ಯೇಯವಿರುವದರಿಂದ ಈ ಕೃತಿಯನ್ನು ಪ್ರಸಿದ್ಧಿಸಿದ್ದೇನೆ.

ಕನ್ನಡಿಗರಲ್ಲಿ ಈ ಗ್ರಂಥವನ್ನೋದಿ ಸಾಮಾಜಿಕ ಸಮಸ್ಯೆಗಳ ಬಗ್ಗೆ ವಿಚಾರ ಮಾಡುವ ಪ್ರವೃತ್ತಿಯಾದರೆ ನನ್ನ ಶ್ರಮದ ಸಾರ್ಥಕವಾಯಿತೆಂದು ತಿಳಿಯುತ್ತೇನೆ.

ಮಿಂಚಿನಬಳ್ಳಿಯು ಆಶಿಸಿದಷ್ಟು ಈ ವರ್ಷ ಕನ್ನಡಿಗರಿಂದ ಅದಕ್ಕೆ ನೆರವು ದೊರೆತಿಲ್ಲ. ಇಷ್ಟೇ ಅಲ್ಲ, ಅದು ಅರಹೊಟ್ಟೆಯಿಂದ ದುಡಿಯುತ್ತಲಿದೆ. ಅದು ಕನ್ನಡಿಗರ ಸೇವೆಗೆ ಸಿದ್ಧವಾಗಿದೆ. ಅದನ್ನು ಬದುಕಿಸುವದು ಕನ್ನಡಿಗರ ಕೆಲಸ. ಇದನ್ನು ಮಾಡುವರೆಂಬ ನಂಬುಗೆಯಿಂದ ಮುಂದೆ ಸಾಗಿದ್ದೇನೆ.

ಈ ಪುಸ್ತಕವನ್ನು ಅಂದವಾಗಿ ಅಚ್ಚುಗೊಳಿಸಿ ಸಕಾಲದಲ್ಲಿ ಒದಗಿಸಿ ಕೊಟ್ಟುದಕ್ಕಾಗಿ ಮೋಹನ ಮುದ್ರಣಾಲಯದ ವ್ಯವಸ್ಥಾಪಕರ ಆಭಾರ ಮನ್ನಿಸುತ್ತೇನೆ.

ಸಂಪಾದಕ:

**ಬುರ್ಲಿ ಬಿಂದುಮಾಧವ**

# ಪರಿವಿಡಿ


| | | |
|---|---|---|
| ೧. | ವಿಷಯ ಪ್ರವೇಶ | ೧–೫ |
| ೨. | ಬಂಡವಲವಾದದ ಹುಟ್ಟು | ೬–೧೫ |
| ೩. | ಬಂಡವಲವಾದದ ಭೂತಚೇಷ್ಟೆಗಳು | ೧೬–೨೫ |
| ೪. | ಬಂಡವಲವಾದದ ದೋಷವೆಲ್ಲಿದೆ? | ೨೬–೩೬ |
| ೫. | ಸಾಮ್ಯವಾದದ ಸಿದ್ಧಾಂತ | ೩೭–೪೭ |
| ೬. | ರಾಷ್ಟ್ರೀಕರಣ | ೪೮–೫೩ |
| ೭. | ವಿತರಣ | ೫೪–೬೨ |
| ೮. | ಭಾರತೀಯ ಸಾಮ್ಯವಾದ | ೬೩–೯೨ |
| ೯. | ಸಾಮ್ಯವಾದದ ಪರಿಣಾಮಗಳು | ೯೩–೧೦೮ |
| ೧೦. | ಆಕ್ಷೇಪಕರಿಗೆ ಉತ್ತರಗಳು | ೧೦೯–೧೨೭ |
| ೧೧. | ಗಾಂಧೀವಾದವೂ ಸಾಮ್ಯವಾದವೂ | ೧೨೮–೧೪೩ |
| ೧೨. | ಸಾಮ್ಯವಾದದ ಶತ್ರುಗಳು | ೧೪೪–೧೪೯ |
| ೧೩. | ಭಾರತವೂ ಸಾಮ್ಯವಾದವೂ | ೧೫೦–೧೬೫ |




# ಮುನ್ನುಡಿ

ಇದನ್ನು ಬರೆದ ನಾವಿಬ್ಬರೂ ಹೊಸಬರು. ಅನನುಭವಿಕರು. ಭಾಷೆ ಬರವಣಿಗೆಯನ್ನರಿಯದವರು. ಆದರೆ ಬರೆಯಬೇಕೆಂಬ ಚಪಲ ಬಹಳ. ಸಾಮ್ಯವಾದವು ನಮಗೆ ಪೂರ್ಣ ಜ್ಞಾನವಿರದಿದ್ದರೂ ಅದನ್ನು ತಿಳಿದುಕೊಳ್ಳಬೇಕೆಂಬ ಹಂಬಲವಿದ್ದವರು. ತಿಳಿದುಕೊಳ್ಳಲು ಪ್ರಯತ್ನಿಸಿದ ಫಲವೇ ಈ ಹೊತ್ತಿಗೆಯು. ಗ್ರಂಥದ ಬರವಣಿಗೆಗೆ ಕೈಹಾಕಿದುದು ಇದೇ ಮೊದಲು.

ಇದರಲ್ಲಿ ನಮ್ಮ ವಿಚಾರಗಳಿಗೆ ಪ್ರಾಧಾನ್ಯವಿಲ್ಲ. ಸಾಮ್ಯವಾದಿಗಳ ವಿಚಾರಗಳನ್ನೆಲ್ಲ ಕನ್ನಡಿಗರ ಮುಂದಿಡುವದೇ ಈ ಬರವಣಿಗೆಯ ಮುಖ್ಯ ಉದ್ದೇಶ. ಆದುದರಿಂದ ನಮಗೆ ಅವಶ್ಯವೆನಿಸಿದ ಎಲ್ಲ ವಿಚಾರಗಳನ್ನೂ ಒಂದೆಡೆಯಲ್ಲಿ ಸಂಗ್ರಹಿಸಿದ್ದೇವೆ. ಸಂಗ್ರಹದಲ್ಲಿಯೂ ಒಂದು ಬಗೆಯಿದೆ. ಒಂದೊಂದು ವಿಷಯಕ್ಕೆ ಸಂಬಂಧಿಸಿದ ವಿಷಯಗಳು ಎಲ್ಲಿಯೇ ಇದ್ದರೂ, ಆ ವಿಷಯವನ್ನು ಪ್ರತಿಪಾದಿಸುವಾಗ ಅಲ್ಲಿ ಅವುಗಳನ್ನು ಕಲೆ ಹಾಕಿದ್ದೇವೆ. **ಭಾರತೀಯ ಸಾಮ್ಯವಾದ, ಗಾಂಧೀವಾದವೂ ಸಾಮ್ಯವಾದವೂ** ಎಂಬ ಪ್ರಕರಣಗಳನ್ನು ಬರೆಯುವಾಗ, ಹೆಚ್ಚಾಗಿ ಶ್ರೀ ಜಯ ಪ್ರಕಾಶ ನಾರಾಯಣರ ವಿಚಾರಗಳನ್ನೇ ತೆಗೆದುಕೊಂಡಿದ್ದೇವೆ.

ಬರೆಯಲು ಅರಿಯದವರು ಎಂದು ಮೊದಲೇ ಬಿನ್ನವಿಸಿಕೊಂಡಿದ್ದೇವೆ. ಇದನ್ನು ಬರೆಯುವಾಗ ಸಾಮ್ಯವಾದದ ಭೂಮಿಕೆಯು ಎದ್ದು ಕಾಣುವಂತೆಯೂ ವಿಚಾರಗಳು ಸ್ಫುಟವಾಗಿ ಮೂಡುವಂತೆಯೂ ಎಚ್ಚರ ತೆಗೆದುಕೊಳ್ಳಲಾಗಿದೆ. ಆದರೆ ಅದು ಎಷ್ಟರಮಟ್ಟಿಗೆ ಸಾಧಿಸಿದೆ ಎಂಬುದನ್ನು ಓದುಗರೇ ನಿರ್ಣಯಿಸಬೇಕು.

ಇದರಲ್ಲಿ ಅನೇಕ ತಪ್ಪುತಡೆಗಳಾಗಿರಬಹುದು. ಆ ಎಲ್ಲ ತಪ್ಪುಗಳಿಗೆ ನಾವು ಹೊಣೆಗಾರರು. ಅವುಗಳನ್ನು ವಾಚಕರು ನಮ್ಮವೆಂದು ತಿಳಿಯಬೇಕು. ಕ್ಷಮಿಸಬೇಕು. ತಿಳಿಸಿ ನಮ್ಮನ್ನು ತಿದ್ದಬೇಕು. ನಾವು ನಿಮ್ಮ ಸೇವೆಗೆ ಸದಾಸಿದ್ಧರು. ತಿಳಿದು ಬೆಳೆಯ ಬೇಕೆನ್ನುವವರು.

ಈ ನಮ್ಮ ಬರವಣಿಗೆಯು ವಾಚಕರಿಗೆ ರುಚಿಸಿದರೆ, ಪ್ರಜಾಪ್ರಭುತ್ವ, ರಶಿಯದ ಪಂಚವಾರ್ಷಿಕ ಯೋಜನೆ ಮೊದಲಾದ ಬರಹಗಳಿಗೆ ಕೈಹಾಕಬೇಕೆಂದಿದ್ದೇವೆ. ಅದು ವಾಚಕರನ್ನೇ ಕೂಡಿದೆ.

ನಾವು ಹೊಸಬರು, ಆದ ತಪ್ಪುತಡೆಗಳನ್ನು ಉದಾರ ಅಂತಃಕರಣಿಗಳಾದ ವಾಚಕರು ಕ್ಷಮಿಸುವಿರೆಂದು, ಆಶಿಸುತ್ತೇವೆ.

**ಬುರ್ಲಿ ಬಿಂದುಮಾಧವ**

# ಆಧಾರ ಗ್ರಂಥಗಳ ಪಟ್ಟಿ.


| | | |
|---|---|---|
| 1 | The Capital | *Karl Marx* |
| 2 | Industrial Democracy | *Sydney Webb* |
| 3 | Inteligent Woman's Guide to Socialism | *G. B. Shaw* |
| 4 | Socialism and Superior Brains | ,, |
| 5 | Social Movement. | *Macdonald J. R.* |
| 6 | Karl Marx's Interpretation of History | *Bober M. M.* |
| 7 | What Marx really meant ?. | *Cole G. D. H.* |
| 8 | Organised Labour | ,, |
| 9 | Communism | *Laski H. J.* |
| 10 | Liberty in the modern State | ,, ,, |
| 11 | Russian Experiment | *K. T. Shah* |
| 12 | Social control | *Rose E. A.* |
| 13 | The End of Laissez Faire | *Keynes J. M* |
| 14 | Wages and Capital | *Taussig F. W.* |
| 15 | The Industrial Revolution of the 18th Century in England | *Toynbee* |
| 16 | Reconstructing India | *Visweshwaraya M.* |
| 17 | Indian Socialism | *Narain* B. |
| 18 | Planning under Socialism | *Beveridge Sir W. H.* |
| 19 | The Theory of Unemployment | *Pigou A. C.* |
| 20 | Karl Marx', Capital | *Lindsay A. D.* |
| 21 | Progress of Capitalism | *Cunningham* |
| 22 | Mangal Prabhat | *Mahatma Gandhi* |
| 23 | Why Socialism for India | *Jayaprakash Narain* |
| 24 | साम्यवाद ही क्यों । | ರಾಹುಲ ಸಾಂಕೃತ್ಯಾಯನ. |

# ಸಾಮ್ಯವಾದ

## ವಿಷಯಪ್ರವೇಶ

•

೧

ಭಾರತವು ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಲಿದೆ. ಸ್ವಾತಂತ್ರ್ಯದಿಂದ ಭಾರತದ ದಾರುಣವಾದ ಬಡತನವು ಬಯಲಾಗುವದೆಂದು ಲಕ್ಷಾವಧಿ ಜನರು ಹೋರಾಡುತ್ತಲಿದ್ದಾರೆ ರಾಷ್ಟ್ರದ ಸ್ವಾತಂತ್ರ್ಯವು ತಮ್ಮ ಜೀವನವನ್ನು ಸುಖಮಯವಾಗಿ ಮಾಡುವದೆಂದು, ಅನೇಕರು ಸವಿಗನಸುಗಳನ್ನು ಕಾಣುತ್ತಲಿದ್ದಾರೆ. ಅನೇಕ ದೇಶಭಕ್ತರು, ದೇಶದ ಪಾರತಂತ್ರ್ಯವೇ, ಹಿಂದೀ ರಾಷ್ಟ್ರದ ಅಧೋಗತಿಗೆ-ಬಡತನಕ್ಕೆ-ಮೂಲ ಕಾರಣವೆಂದೂ, ಸ್ವಾತಂತ್ರ್ಯ ಸಂಪಾದನೆಯ ಹೊರತು ಗತಿ ಇಲ್ಲವೆಂದೂ, ಸಾರುತ್ತಲಿದ್ದಾರೆ. ಬ್ರಿಟಿಶರ ಆಳಿಕೆಯು ಹಿಂದೀ ರಾಷ್ಟ್ರದ ಸಂಪತ್ತನ್ನು ಸೂರೆಗೊಂಡಿದೆ. ಉದ್ಯೋಗ ವ್ಯವಸಾಯಗಳನ್ನು ಮಣ್ಣುಗೂಡಿಸಿದೆ. ಒಕ್ಕಲತನವನ್ನು ಹಾಳು ಮಾಡಿದೆ. ಕೋಟ್ಯಾವಧಿ ಜನರನ್ನು ಹೊಟ್ಟೆಗೆ ತುತ್ತು ಕೂಳಿಲ್ಲದೆ, ಅನ್ನ ಅನ್ನವೆಂದು ಬೀದಿ ಬೀದಿಗಳಲ್ಲಿ ಅಲೆಯುವಂತೆ ಮಾಡಿದೆ. ಅಸಂಖ್ಯಾತ ಹಸುಮಕ್ಕಳು ಹೊಟ್ಟೆಯ ಪಾಡಿಗಾಗಿ ಹಲುಬಿ, ಅಲ್ಪ ವಯಸ್ಸಿನಲ್ಲಿಯೇ ಮರಣಕ್ಕೀಡಾಗುವ, ಪರಿಸ್ಥಿತಿಯನ್ನುಂಟುಮಾಡಿದೆ. ಒಟ್ಟಿನಲ್ಲಿ ಭಾರತ ರಾಷ್ಟ್ರದ ಅಧೋಗತಿಗೆ ಪರಕೀಯರ ಆಳಿಕೆಯೇ ಮುಖ್ಯ ಕಾರಣ. ಇದು ನಿಜ. ಆದರೆ, ಪರಕೀ

ಮಾತ್ರ ಆಳಿಕೆಯು ಸಾರವಾಗಿ, ಭಾರತವು ಸ್ವತಂತ್ರವಾಯಿತೆಂದು ತಿಳಿಯೋಣ. ಸ್ವಾತಂತ್ರ್ಯದಿಂದ ಭಾರತರಾಷ್ಟ್ರದ ಸಂಪತ್ತೂ ಹೆಚ್ಚಬಹುದು. ಉದ್ಯೋಗ ವ್ಯವಸಾಯಗಳೂ ಬೆಳೆಯಬಹುದು. ಆದರೆ, ಬಡವರ ಬಡತನವು ಹಿಂಗುವದೇ? ಎಲ್ಲರೂ ಸುಖಿಗಳಾಗುವರೇ? ಎಂಬುದೇ ಇಂದಿನ ನಮ್ಮ ಮಹತ್ವದ ಸಮಸ್ಯೆಯಾಗಿದೆ. "ರಾಮರಾಜ್ಯವಾದರೂ ರೈತರಾಗೀ ಬೀಸುವುದು ತಪ್ಪಲಿಲ್ಲ." ಎಂಬಂತೆ ಬಡವನ ಬಡತನವು ದೂರಾಗದಿದ್ದರೆ ಅಂಥ ಸ್ವರಾಜ್ಯ-ಸ್ವಾತಂತ್ರ್ಯಗಳಿಂದೇನು ಉಪಯೋಗ? ಕೇವಲ ರಾಷ್ಟ್ರದ ಸ್ವಾತಂತ್ರ್ಯವು-ಪ್ರಜಾಪ್ರಭುತ್ವವು-ಬಡತನವನ್ನು ನೀಗಿಸಬಲ್ಲುದೇ? ಸಮಾಜದಲ್ಲಿ ಈಗ ನೆಲೆಸಿರುವ ಅಸಂಖ್ಯ ದುಃಖದ ಕಾರಣಗಳನ್ನು ದೂರಮಾಡಬಲ್ಲುದೆ?

ಆದರೆ ಜಗತ್ತಿನ ಇತಿಹಾಸವು ಇದರ ವಿರುದ್ಧವಾಗಿಯೇ ಸಾಕ್ಷೀ ನುಡಿಯುತ್ತಲಿದೆ.

ಅಮೇರಿಕೆಯು (ಸಂಯುಕ್ತ ಸಂಸ್ಥಾನಗಳು) ಜಗತ್ತಿನಲ್ಲಿಯೇ ಧನಾಢ್ಯ ರಾಷ್ಟ್ರವು. ಪ್ರಜಾಪ್ರಭುತ್ವವು, ಚರಮಸೀಮೆಯನ್ನು ಮುಟ್ಟಿದೆ. ೧೫೦ ವರ್ಷಗಳಿಂದ ಪ್ರಜಾಪ್ರಭುತ್ವವು ಅಲ್ಲಿ ತನ್ನ ಆಳಿಕೆಯನ್ನು ನಡೆಯಿಸಿದೆ. ಧನಿಕರಿಗೆ ಧನವನ್ನಿಡಲು ಸ್ಥಳವಿಲ್ಲ. ಆದರೆ, ಅಲ್ಲಿ ಜನಸಾಮಾನ್ಯರ ಸ್ಥಿತಿ ಏನಿದೆ? ಬಡತನವು, ಭೀಕರ ನೃತ್ಯವಾಡುತ್ತಲಿದೆ. ೧೫೦ ಲಕ್ಷ ಸಂಖ್ಯಾತರಾದ ಜನರು ಅರೆಹೊಟ್ಟೆ ಕೂಡ ತುಂಬದೆ ಉಪವಾಸದಿಂದ ಬಳಲುತ್ತಿದ್ದಾರೆ. ಪ್ರಜಾಪ್ರಭುತ್ವವನ್ನು ಹೆಮ್ಮೆಯಿಂದ ಜಗತ್ತಿಗೆ ಸಾರುತ್ತಿರುವ ಅಮೇರಿಕೆಯಲ್ಲಿಯೂ, ಪ್ರಜಾಪ್ರಭುತ್ವವು ಇಷ್ಟು ದೀರ್ಘ ಕಾಲ ಇದ್ದರೂ, ಬಡವರ ಬಡತನವು ಹಿಂಗದಿರುವುದು ಆಶ್ಚರ್ಯವಲ್ಲವೇ? ಜನರು ತಮ್ಮನ್ನು ತಾವೇ ಕೂಳುಗೇಡಿಗಳಾಗುವಂತೆ ಆಳಿಕೊಂಡರೆಂಬುದು ಇದಕ್ಕೂ ಆಶ್ಚರ್ಯಕರವಾದ ಸಂಗತಿ.

ಸ್ವಾತಂತ್ರ್ಯ, ಸಾಮ್ರಾಜ್ಯ, ಐಶ್ವರ್ಯಗಳಿಂದ ಜಗತ್ತಿನಲ್ಲಿಯೇ ಮೆರೆಯುವ ಇಂಗ್ಲಂಡದಲ್ಲಿ ಏನಿದೆ? ಒಂದೆಡೆಯಲ್ಲಿ ಲಾರ್ಡರು ಅರಮನೆಗಳನ್ನು ಕಟ್ಟಿಕೊಂಡು ಮೆರೆಯುತ್ತಲಿದ್ದರೆ ಮತ್ತೊಂದೆಡೆಯಲ್ಲಿ ಮನೆ

ಮಾರುಗಳಿಲ್ಲದೆ ಹೊಟ್ಟೆಬಟ್ಟೆಗಿಲ್ಲದೆ, ತಿರುಗುವ ಬಡವರ ಗುಂಪು ಇನ್ನೊಂದೆಡೆಗೆ ಇದೆ. ಧನಿಕರು ದೊಡ್ಡ ಕಾರಖಾನೆಗಳನ್ನು ನಡೆಯಿಸಿ, ತಮ್ಮ ಧನಬಲದಿಂದ ಲಕ್ಷಾವಧಿ ಜನರನ್ನು ಗುಲಾಮರನ್ನಾಗಿ ಮಾಡು ತ್ತಲಿದ್ದಾರೆ. ಕೂಲಿಕಾರರ ಕರುಳಿನ ಕೂಗು, ಅಂತಃಕರಣವನ್ನು ಕೆರಳಿಸುತ್ತಲಿದೆ. ಸಂಪತ್ತಿನ ಬೀಡಾದ ಇಂಗ್ಲಂಡದಲ್ಲಿ ೧೦೦ ಕ್ಕೆ ೯೦ ಜನ ಪ್ರಜೆಗಳು ಕೂಲಿಗಳಾಗಿ ಅರೆಹೊಟ್ಟೆಯಿಂದ ಧನಿಕರ ಗುಲಾಮ ರಾಗಿದ್ದುದೇಕೆ?

ಇಂಗ್ಲಂಡದ ಬ್ಯಾಂಕಿನಲ್ಲಿ ಅಪಾರ ಸಂಪತ್ತು ಇರಬಹುದು? ಅಲ್ಲಿಯ ಧನಿಕರು ವ್ಯಾಪಾರ ಉದ್ದಿಮೆಗಳಿಂದ ಹಣ ಗಳಿಸಿ, ರಾಷ್ಟ್ರದ ಸಂಪತ್ತಿ ಯನ್ನು ಬೆಳೆಯಿಸಿರಬಹುದು? ಆದರೆ, ಅಲ್ಲಿಯ ಸಾಮಾನ್ಯ ಜನರು, ನಿರುದ್ಯೋಗಿಗಳಾಗಿ ಹೊಟ್ಟೆಗಿಲ್ಲದೆ ಬಳಲುವದು ತಪ್ಪಿಲ್ಲವೆಂದ ಮೇಲೆ ಈ ಸಂಪತ್ತಿನಿಂದೇನು ಪ್ರಯೋಜನ! ಇಂಗ್ಲಂಡದ ಗಿರಣಿಗಳು ಜಗತ್ತಿಗೇ ಅರಿವೆಗಳನ್ನು ಪೂರೈಸುತ್ತಿರಬಹುದು. ಆದರೆ ಅರಿವೆಗಳನ್ನೇ ಉತ್ಪನ್ನ ಮಾಡುವ ಅಲ್ಲಿಯ ಕೂಲಿಕಾರರು, ಬಟ್ಟೆಗಳಿಲ್ಲದೆ, ಆರೆಬತ್ತಲೆಯರಾಗಿ-ಚಳಿಯಿಂದ ಸಾಯುತ್ತಿರುವದನ್ನು ನಾವು ದಿನಾಲು ಕೇಳುತ್ತಲಿಲ್ಲವೆ? ಸ್ವರಾಜ್ಯ ಸುಖದಲ್ಲಿ ಚಿರಕಾಲವೂ ಇರುವ, ಪರದಾಸ್ಯಕ್ಕೆ ಎಂದೂ ತಲೆ ಬಾಗದ ಇಂಗ್ಲೀಷ ಜನಾಂಗವು ಈ ರೀತಿ ಬಡತನದಿಂದ ಬಳಲುವದೇಕೆ? ಯಂತ್ರಯುಗವು ಪ್ರಾರಂಭವಾದಂದಿನಿಂದಂತೂ ಕೂಲಿಕಾರರ ಬಾಳು ತೀರ ಹಾಳಾಗುತ್ತನಡೆದಿದೆ. **ಕಾರ್ಲಾಯಿಲನು** ಇಂಗ್ಲಂಡದ ಈ ಘೋರತರ ವಾದ ಸ್ಥಿತಿಯನ್ನು ಕಂಡು, ಕನಲಿ, "ಹಸಿದು ಸತ್ತವನ ಪೂಜೆ! ಹಸಿದು ಪ್ರಜಾಪ್ರಭುತ್ವ!" ಎಂದು ಮರುಗಿದನು. ಇಂಗ್ಲಂಡದ ಈ ಬಡತನವೇ **ಕಾರ್ಲಮಾರ್ಕ್ಸ**ನಿಗೆ ದಿವ್ಯ ಚಕ್ಷುಗಳನ್ನು ಕೊಟ್ಟಿತು. ಸ್ವಾತಂತ್ರ್ಯ, ಸ್ವರಾಜ್ಯ, ಪ್ರಜಾಪ್ರಭುತ್ವಗಳು ಜಗತ್ತಿನಲ್ಲಿಯ ಬಡತನವನ್ನು ಹಿಂಗಿಸಲಾರವೆಂದೂ, ಜನರ ದುಃಖಗಳು ದೂರಾಗವೆಂದೂ ಸಾರಿದನು. ದೀರ್ಘವಾಗಿ ವಿಚಾರಮಾಡಿ, ಈ ಬಡತನದ ಬೇಗೆಯು ನಂದಬೇಕಾ ದರೆ, ಈಗಿದ್ದ ಸಮಾಜದ ಆರ್ಥಿಕ ಸ್ವರೂಪವೇ ಬದಲಾಗಬೇಕೆಂದೂ, ಧನಿ

ಕರ ಸುಳಿಗೆಯೇ ಜಗತ್ತಿನಲ್ಲಿಯ ಸಾಂಪತ್ತಿಕ ಅಸಮಾನತೆಗೆ ಮುಖ್ಯ ಕಾರಣವೆಂದೂ ಗರ್ಜಿಸಿದನು.

ಮಾರ್ಕ್ಸನ ಈ ತತ್ವಜ್ಞಾನವು ಇಂಗ್ಲಂಡದಲ್ಲಿಯೇ ಜನ್ಮತಾಳಿದರೂ ಅದು ಅಲ್ಲಿ ಬೇರೂರಲಿಲ್ಲ. ಇಂಗ್ಲಂಡದ ಬಹು ಸಂಖ್ಯಾಕರು ಇಂದಿಗೂ ಬಡವರೇ ?

ಪ್ರಜಾಪ್ರಭುತ್ವ, ಸ್ವಾತಂತ್ರ್ಯಗಳ ತವರುಮನೆಯಾದ ಅಮೇರಿಕ ಇಂಗ್ಲಂಡದ ಪ್ರಜೆಗಳು ಪಾರತಂತ್ರ್ಯದಲ್ಲಿರುವ ನಮ್ಮಂತೆಯೇ ಬಡತನದಿಂದ ಬಳಲುವರೆಂದಬಳಿಕ, ಕೇವಲ ಸ್ವಾತಂತ್ರ್ಯ, ಪ್ರಜಾಪ್ರಭುತ್ವಗಳು ನಮ್ಮನ್ನು ಉದ್ಧರಿಸಲಾರವೆಂಬುದು ಮೇಲೆಯೇ ಕಾಣುತ್ತಲಿದೆ. ಈಗಿನ ರಾಜ್ಯಪದ್ಧತಿಗಳು ಭಾಂಡವಲವಾದದ ತತ್ವಗಳನ್ನು ಸಮರ್ಥಿಸುತ್ತವೆ. ಆದ್ದರಿಂದಲೇ ಬಡವರ ಬಡತನವನ್ನು ಹಿಂಗಿಸಲು ಇವು ಅಸಮರ್ಥವಾಗಿವೆ. ಆದ್ದರಿಂದ ನಾವು ನಿರ್ಮಿಸುವ ಸ್ವರಾಜ್ಯವು ಎಲ್ಲರಿಗೂ ಸುಖ-ಸಮಾಧಾನಗಳನ್ನುಂಟುಮಾಡುವಂಥದಿರಬೇಕು. ಆದ್ದರಿಂದಲೇ **ಪಂಡಿತ ಜವಾಹರರು**

> **"ವಿದೇಶಿಯ ಪ್ರಭುತ್ವವನ್ನು ತಳ್ಳಿ ದೇಶಿಯ ಪ್ರಭುತ್ವವನ್ನು ನೆಲೆಗೊಳಿಸಿ, ಇಲ್ಲಿಯ ಧನಿಕರ ಬೇರೂರಿದ ಹಿತಸಂಬಂಧಗಳನ್ನು** (Vested interests) **ಹಾಗೆಯೇ ಇರಗೊಟ್ಟರೆ ನಮಗೆ ಸ್ವಾತಂತ್ರ್ಯದ ನೆರಳು ಸಹ ಸಿಕ್ಕಂತಾಗಲಿಲ್ಲ"**

ಎಂದು ಘೋಷಿಸುವದರ ಮರ್ಮವೂ ಇದೆ. ಅಂದ ಮೇಲೆ, ಸಮಾಜಕ್ಕೆ ಸಮಾಜವನ್ನೇ ಆಹುತಿಗೊಳ್ಳುವ ಈ ಭಾಂಡವಲವಾದ ಅಂದರೇನು ? ಇದರ ತತ್ವಗಳಾವು ? ಅವನ್ನು ಎಲ್ಲ ರಾಷ್ಟ್ರಗಳು ಎತ್ತಿ ಹಿಡಿದದ್ದೇಕೆ ? ಈ ಎಲ್ಲ ಮಾತುಗಳನ್ನು ಕೂಲಂಕುಷವಾಗಿ ವಿಚಾರಿಸುವದು ಅವಶ್ಯವಿದೆ.

ಬಂಡವಾಳಗಾರಿಕೆಗೆ, ಸಾಮ್ಯವಾದವು ಹುಟ್ಟುಹಗೆ. ಸಾಮ್ರಾಜ್ಯವಾದವು ಅದರ ರಕ್ಷಾಕವಚ. ಬಾಂಡವಾಳವಾದದ ಹುಟ್ಟು ಹಂಬಲಗಳ ಸರಿಯಾದ ಅರಿವು ಜನತೆಯಲ್ಲಿ ಹಬ್ಬಿದಂತೆ, ಸಾಮ್ಯವಾದಕ್ಕೆ-ಸ್ವಾಗತವು ಸಿಕ್ಕುತ್ತಿದೆ. ಬಂಡವಾಳವಾದದ ಖಂಡನವಿಲ್ಲದೆ

ಸಾಮ್ಯವಾದ ಮಂತನಕ್ಕೆ ಅರ್ಥವೇ ಇಲ್ಲ. ಅದು ತಿಳಿಯುವದೂ ಇಲ್ಲ. ಆದುದರಿಂದ ಮೊದಲು ಬಾಂಡವಲವಾದವನ್ನು ವರ್ಣಿಸುವೆವು. ನಂತರ ಸಾಮ್ಯವಾದ, ಅದರ ಅವಶ್ಯಕತೆ, ಮೊದಲಾದ ವಿಷಯ ವಿವೇಚನೆ.

ಬಡವರ ಭಾಗ್ಯದೇವತೆಯೆಂದು, ಜಗತ್ತಿನ ವಿಚಾರಗಳಲ್ಲಿಯೇ ಕ್ರಾಂತಿಯನ್ನುಂಟುಮಾಡಿದ ಸಾಮ್ಯವಾದದ ತತ್ವಗಳ ವಿವೇಚನೆಯೇ ಈ ಹೊತ್ತಿಗೆಯ ಹೆಗ್ಗುರಿಯು.

# ಬಂಡವಳವಾದದ ಹುಟ್ಟು

●

## ೨

ಜಗತ್ತಿನಲ್ಲಿಯೇ ವಿಚಾರಕ್ರಾಂತಿಯನ್ನುಂಟುಮಾಡಿ ಮಾನವ ಜನಾಂಗವನ್ನೇ ದಿಗ್ಭ್ರಮೆಗೊಳಿಸಿದ, ರಾಷ್ಟ್ರ ರಾಷ್ಟ್ರಗಳನ್ನು ತನ್ನ ಸಾಮರ್ಥ್ಯದಿಂದ ಯುದ್ಧರಂಗಕ್ಕೆಳಸಿದ, ಮಾನವ ಜನಾಂಗವನ್ನೇ ತನ್ನ ಮಾಟದಿಂದ ಮಂಕುಗೊಳಿಸಿದ "ದುಡ್ಡೇ ದೊಡ್ಡಪ್ಪನಣ್ಣ" ಎಂದು ಸರ್ವ ಸದ್ಗುಣಗಳನ್ನೂ ಮೆಟ್ಟಿ, ಮದದಿಂದ, ಮೆರೆಯುವ ಈ ಬಂಡವಲವಾದದ ಹುಟ್ಟೆಲ್ಲಿದೆ? ಎಂಬುದನ್ನು ಆಳವಾಗಿ ವಿಚಾರ ಮಾಡಹತ್ತಿದರೆ, ಇದರ ಬೇರುಗಳು ಬಹು ದೂರದ ವರೆಗೆ ಇಳಿದಿವೆ ಎಂದು ಕಂಡು ಬರುವದು. ಇತಿಹಾಸದ ಪುಟಗಳನ್ನು ತಿರುವಿ ಹಾಕಿದರೆ ಮಾನವನ ಪ್ರಗತಿಯೊಡನೆಯೇ ಬಂಡವಲವಾದವೂ ಬೆಳೆದು ಬಂದಿದೆ ಎಂದು ಕಾಣುವದು. ಇಷ್ಟೇ ಅಲ್ಲ, ಮಾನವನ ಸಂಸ್ಕೃತಿಯನ್ನೇ ಬಂಡವಲು ಹುಟ್ಟಿಸಿತೋ ಎನ್ನುವಷ್ಟು ಅದರೊಡನೆ ಸಮರಸವಾಗಿದೆ. ಆದುದರಿಂದ ಹಣದ ಹುಟ್ಟಿನೊಡನೆಯೇ ಮಾನವನ ಬೆಳವಣಿಗೆಯ ಇತಿಹಾಸವನ್ನೂ ಅರಿಯುವದು ಅಗತ್ಯ.

**ಹಣದ ಹುಟ್ಟು ಮತ್ತು ಸಂಚಯ—** ಈ ಜಗತ್ತಿನಲ್ಲಿ ಒಂದು ಕಡೆಗೆ ಮಾನವ ವರ್ಗವಾದರೆ ಇನ್ನೊಂದೆಡೆಗೆ ಧನವೆಂಬುದೆಲ್ಲ ಪ್ರಕೃತಿಯ ಗರ್ಭದಲ್ಲಿ. ಮಾನವನು ತನಗೆ ಬೇಕಾದುದನೆಲ್ಲ ದುಡಿಮೆಯಿಂದ ಅವಳ ಪೂಜೆಗೈದು ಪಡೆಯಬೇಕು. ತನ್ನ ಉಪಯೋಗಕ್ಕೆಂದು ಅವನು ಗಳಿಸಿದುದೆಲ್ಲವೂ ಅವನ ಧನವು. ಈ ಮೇರೆಗೆ ಪ್ರಕೃತಿಯೇ ಧನದ ಉಗಮ. ಮಾನವನ ಶ್ರಮವೇ ಅದನ್ನು ಹುಟ್ಟಿಸುವ ಶಕ್ತಿ, ಇದೇ ಅರ್ಥಶಾಸ್ತ್ರದ ಅಡಿಗಲ್ಲು.

ಹಣದ ಸಂಗ್ರಹವಾಗುವುದು ಹೇಗೆ? ಮಾನವನು ಭೂಮಿಯಿಂದ ತನ್ನ ಉಪಜೀವನಕ್ಕೆ ಸಾಲುವಷ್ಟು ಮಾತ್ರ ದೊರಕಿಸಿಕೊಳ್ಳುವವರಗೆ, ಅವನಿಗೆ ಕೂಡಿಹಾಕಲಿಕ್ಕೆ ಏನೂ ಉಳಿಯುವದಿಲ್ಲ. ಮಾನವನು ನಿಸರ್ಗ ದಿಂದ ಗಳಿಸಬಹುದಾದ ಧನದ ಪ್ರಮಾಣವು ಅವನ ಉತ್ಪಾದಕಶಕ್ತಿ ಯನ್ನು ಅವಲಂಬಿಸಿರುತ್ತದೆ. ಅವನು ಕೆಲಸ ಮಾಡುವ ರೀತಿ, ಮತ್ತು ಅದಕ್ಕೆ ಉಪಯೋಗಿಸುವ ಸಾಧನಗಳ ಯೋಗ್ಯತೆ, ಇವುಗಳಿಂದ ಅವನ ಉತ್ಪಾದಕ ಶಕ್ತಿಯನ್ನು ಕಂಡುಹಿಡಿಯಬಹುದು. ಅಂದಮೇಲೆ, ಧನದ ಸಂಗ್ರಹವಾಗಬೇಕಾದರೆ, ಮಾನವನ ಉತ್ಪಾದಕ ಶಕ್ತಿಯು ಆತನ ಉಪಜೀವಿಕೆಗೆ ಬೇಕಾಗುವದಕ್ಕಿಂತಲೂ ಹೆಚ್ಚು ಗಳಿಸುವಷ್ಟು ಯೋಗ್ಯತೆ ಯುಳ್ಳದ್ದಾಗಬೇಕು. ಇದು ಧನಸಂಗ್ರಹದ ಮೂಲ ಮಾತು.

ಈ ಮೂಲ ಮಾತುಗಳನ್ನು ಅರಿತುಕೊಂಡರೆ, ಮಾನವನ ಪ್ರಗತಿ ಯನ್ನು ನಿರೀಕ್ಷಿಸುವಾಗ, ಹೊಸ ಬೆಳಕು ನಮಗೆ ಕಾಣುವದು.

**ವನಚರಯುಗ**—ಮನುಷ್ಯನು ವನಚರನಿದ್ದಾಗ ಅವನಿಗೆ ಹಸಿವೆ ನೀರಡಿಕೆಗಳನ್ನು ಪೂರೈಸಿಕೊಳ್ಳುವುದಕ್ಕಿಂತಲೂ ಅವನ ಮಾನಸಿಕ ಪ್ರಗತಿ ಯಾಗಿರಲಿಲ್ಲ. ಹಸಿವೆಗಾಗಿ ಶಾರೀರಿಕ ಶಕ್ತಿಯನ್ನು ಉಪಯೋಗಿಸಿ, ಬೇಟೆಯಾಡಿ, ತನ್ನ ಉದರ ನಿರ್ವಾಹವನ್ನು ಸಾಗಿಸುತ್ತಿದ್ದನು. ಆಹಾರ ಕ್ಕಾಗಿ ದಿನಾಲು ಹೋರಾಡುವ ಪ್ರಸಂಗವಿತ್ತು. ಒಂದು ದಿನ ಬೇಟೆ ಸಿಗದಿದ್ದರೆ. ಉಪವಾಸ. ಹೀಗೆ ಹೊಟ್ಟೆಗಾಗಿ ಅಲೆದಾಡುತ್ತಿದ್ದನು. ಈ ಯುಗದಲ್ಲಿ ಸಂಗ್ರಹವು ಸಾಧ್ಯವೇ ಇದ್ದಿಲ್ಲ.

**ಕೃಷಿಯುಗ**— ಈ ಬಿಕ್ಕಟ್ಟಿನ ಪರಿಸ್ಥಿತಿಯನ್ನು ಎದುರಿಸಲು, ಮಾನವನು ಅನೇಕ ತೊಂದರೆಗಳನ್ನು ಅನುಭವಿಸಿ, ಸಂಗ್ರಹಿಸಲು ಯೋಗ್ಯವಾದ ಧಾನ್ಯಾಹಾರವನ್ನು ಕಂಡು ಹಿಡಿದನು. ಈ ಧಾನ್ಯ ಗಳನ್ನು ಬಿತ್ತಿ ಬೆಳೆಸುವ ಕಲೆಯೂ ಉದಯವಾಯಿತು. ಆಗ ಅವನು ವನಚರನಂತೆ ಅಲೆದಾಡದೆ, ಒಂದು ಸ್ಥಳದಲ್ಲಿ ನೆಲೆಯೂರಿ ನಿಲ್ಲಬೇಕಾ ಯಿತು. ಫಲವತ್ತಾದ ಪ್ರದೇಶಗಳನ್ನು ಹುಡುಕಿ ಸಾಗುವಮಾಡಿಕೊಂಡು,

ಗುಂಪುಗೂಡಿಕೊಂಡು ವಾಸಮಾಡಹತ್ತಿದನು. ಒಂದು ಸ್ಥಳದಲ್ಲಿ ನಿಂತು, ಕೆಲವೊಂದು ಕ್ಷೇತ್ರವನ್ನು ಒಬ್ಬನೇ ಸಾಗುವಮಾಡುವದರಿಂದ ಅನೇಕ ಜನರ ಆಹಾರವು ಹುಟ್ಟಹತ್ತಿತು. ಒಬ್ಬನೇ ದುಡಿದರೂ, ಸುಗ್ಗಿಯ ಕಾಲದಲ್ಲಿ ಕ್ಷೇತ್ರವಿಸ್ತಾರದಿಂದ ಬಂದ ಬೆಳೆಯನ್ನು ಯೋಗ್ಯ ರೀತಿಯಿಂದ ಸಂಗ್ರಹಿಸಲು, ಅವನಿಗೆ ಅನೇಕರ ನೆರವಿನ ಅವಶ್ಯಕತೆ ಯುಂಟಾಯಿತು. ಇದರಿಂದ ಕುಟುಂಬ, ಗ್ರಾಮಗಳ, ಜೀವನವು ತಲೆದೋರಿ, ಒಂದು ಬಗೆಯ ನಾಗರೀಕತೆಯು ತಲೆಯೆತ್ತಿತು. ಈಗ ಮಾನವನಲ್ಲಿ, ಸಂಗ್ರಹ ಮಾಡುವ ಸಾಮರ್ಥ್ಯವುಂಟಾಯಿತು. ತಾನು, ತನ್ನ ಕುಟುಂಬ, ತನ್ನ ಗುಂಪು ಎಂಬ ಭಾವನೆಗಳು ಉದಯವಾದವು. ಆದರೂ ಇದರಿಂದ ಒಂದು ಬಗೆಯ ಸಂಘಟನೆಯು ಬೆಳೆದು, ಸಾಂಘಿಕ ಜೀವನಕ್ಕೆ ಅರ್ಥಾತ್ ಗ್ರಾಮಜೀವನಕ್ಕೆ ಆರಂಭವಾಯಿತು.

**ಕ್ಷಾತ್ರಯುಗ—** ಹೀಗೆ ಒಂದುಗೂಡಿ ಗುಂಪು ಕಟ್ಟಿಕೊಂಡ ಕಾರಣವು ಇನ್ನೂ ಒಂದು ಇದೆ. ಸಾಗುಮಾಡಿದ ಭೂಮಿ, ಒಕ್ಕಲತನಕ್ಕೆ ಆಧಾರವಾದ ಪಶುಗಳ ರಕ್ಷಣೆ, ತಮ್ಮಲ್ಲಿರುವ ಧಾನ್ಯದವಸಗಳ ರಕ್ಷಣೆ, ಇವುಗಳ ಸಲುವಾಗಿ ಸಂಘಟನೆ ಮಾಡಿಕೊಳ್ಳದೆ, ಗತ್ಯಂತರವಿರಲಿಲ್ಲ. ಧಾನ್ಯವು ಸಂಗ್ರಾಹ್ಯವು ಅದನ್ನು ಸಂಗ್ರಹಿಸಿ, ಸುಖವಾಗಿ, ಶ್ರಮವಿ ಲ್ಲದೆ ಜೀವಿಸಬಹುದೆಂಬ ಅರಿವುಂಟಾದೊಡನೆಯೇ, ಅದಕ್ಕಾಗಿ ಸ್ಪರ್ಧೆ ಯುಂಟಾಗುವದು ಸ್ವಾಭಾವಿಕ. ಅದಕ್ಕಾಗಿ ಎರಡನೇ ಪಂಗಡದವರು, ತಮ್ಮ ಮೇಲೆ ದಾಳೀಮಾಡಿ, ಧಾನ್ಯದವಸಗಳನ್ನು ದೋಚಿಕೊಂಡು ಹೋದರೆ, ಇಡೀ ಗುಂಪಿಗೇ ಗಂಡಾಂತರ ಒದಗುವದೆಂದು ಬಗೆದು, ತಮ್ಮಲ್ಲಿಯೇ ಬಲಶಾಲಿಯಾದವನನ್ನು ಹುಡುಕಿ ಇಂಥ ದಾಳಿಗಳಿಂದ ತಮ್ಮನ್ನು ರಕ್ಷಿಸಲು ನಿಯಮಿಸಿಕೊಂಡರು. ಎಲ್ಲರೂ ಅವನ ಚರಿತಾ ರ್ಥದ ಭಾರವನ್ನು ಹೊತ್ತರು. ಇದಕ್ಕೆ ಪ್ರತಿಯಾಗಿ, ಅವನು ಇವರ ನಾಯಕನಾಗಿ ಆ ಗುಂಪಿನ ರಕ್ಷಣೆಯ ಭಾರವನ್ನು ವಹಿಸಿದನು. ಹೀಗೆ ಧನವು ತನ್ನ ಆಟಕ್ಕೆ ಮೊದಲುಮಾಡಿತು.

ಮೊದಮೊದಲು ಈ ನಾಯಕರು ಗುಂಪಿನ ಗಂಡಾಂತರವನ್ನು ಗುಂಪಿನ ನೆರವಿನಿಂದಲೇ ಎದುರಿಸುತ್ತಿದ್ದರು. ಎಲ್ಲರ ಹಿತದ ದೃಷ್ಟಿಯಿಂದ

ನಾಯಕನ ಮಾತುಗಳನ್ನು ಎಲ್ಲರೂ ಕೇಳುವದು ಸ್ವಾಭಾವಿಕವು. ಜನಸಂಖ್ಯೆಯು ಬೆಳೆದಂತೆ, ಕಾಲಮಾನಪರಿಸ್ಥಿತಿಗನುಸರಿಸಿ, ಎಲ್ಲರೂ ನಾಯಕನ ಕರೆಬಂದಾಗ, ಸಹಾಯ ಮಾಡುವದು ಅಸಾಧ್ಯವಾಯಿತು. ರಕ್ಷಣೆಯಂತೂ ಆಗಲೇಬೇಕು; ಇದರ ಸಲುವಾಗಿಯೇ ಕೆಲವೊಂದು ಜನರನ್ನು ಮೀಸಲಾಗಿಡುವದು ಅವಶ್ಯವೆನಿಸಿತು. ನಾಯಕನ ನೇತೃತ್ವದಲ್ಲಿ ಒಂದು ತರುಣರ ತಂಡವೇ ನಿರ್ಮಾಣವಾಯಿತು. ಈ ಸಮಾಜವು ದುಡಿಯದಿದ್ದರೂ, ದುಡಿಯುವ ಉಳಿದವರೆಲ್ಲರೂ, ಇವರ ನಿರ್ವಾಹದ ಹೊಣೆಯನ್ನು ಹೊತ್ತು, ಇದಕ್ಕಾಗಿ ನಾಯಕನಿಗೆ ದವಸಧಾನ್ಯಗಳನ್ನು ಸಲ್ಲಿಸಹತ್ತಿದರು.

ಹೀಗೆ ನಾಯಕನಲ್ಲಿ ಧನ ಜನ ಬಲಗಳ ಸಂಗ್ರಹ, ಗುಂಪಿನ ಮೇಲಿನ ಒಡೆತನ, ಉಂಟಾದ್ದರಿಂದ ತಾನು ದೊಡ್ಡವನು, ಶ್ರೇಷ್ಠನು, ಎಂಬ ಭಾವನೆಯು ಮೆಲ್ಲನೆ ತಲೆದೋರಹತ್ತಿತು. ತಾನು ಗುಂಪಿನಲ್ಲಿಯವನೊಬ್ಬನು, ಅವರ ಸೇವಕನು ಎಂಬ ಭಾವನೆಯು ಮೆಲ್ಲನೆ ಮಾಯವಾಗಹತ್ತಿತು. ತಾನು ದೊಡ್ಡವನು ಇದಕ್ಕಿಂತ ಹೆಚ್ಚು ಧನಕ್ಕೆ, ಗುಂಪುಗಳಿಗೆ, ಒಡೆಯನಾಗಬೇಕು ಎಂಬ ಮಹತ್ವಾಕಾಂಕ್ಷೆಯು ಮೊಳಕೆಗಳು ಒಡೆಯಹತ್ತಿದವು.

ಬುದ್ಧಿಶಾಲಿಗಳಾದ ನಾಯಕರು ತಮ್ಮ ತಮ್ಮ ಗುಂಪುಗಳನ್ನು ರಕ್ಷಿಸುತ್ತಿದ್ದರಲ್ಲದೆ, ಹೆಚ್ಚು ಸಂಗ್ರಹಿಸಬೇಕು, ಎಂಬ ಬುದ್ಧಿಯಿಂದ ತಮ್ಮ ನೆರೆಹೊರೆಯ ಜನಾಂಗಗಳ ಮೇಲೆ ಬಿದ್ದು, ಅವರ ದವಸಧಾನ್ಯಗಳನ್ನು ಸುಲಿಯುವದಕ್ಕೆ ಆರಂಭಿಸಿದರು. ಅವರನ್ನು ಗೆದ್ದು, ತಮ್ಮ ಒಡೆತನಕ್ಕೆ ಅವರು ಒಪ್ಪುವಂತೆ ಮಾಡಿ, ಅವರಿಂದ ಕಪ್ಪಕಾಣಿಕೆಗಳನ್ನು ಎತ್ತಹತ್ತಿದರು. ಅವರ ರಕ್ಷಣೆಯ ಭಾರವನ್ನು ತಾವೇ ವಹಿಸಿ, ಆ ಎಲ್ಲ ನಾಡಿಗೆ ತಾವೇ ರಾಜರೆಂದು ವಿರಾಜಮಾನರಾಗಹತ್ತಿದರು.

ಹೀಗೆ, ಧನವು ಮಾನವನಲ್ಲಿ ಆಶೆ ಆಕಾಂಕ್ಷೆಗಳನ್ನುಂಟುಮಾಡಿ ಕೀಳು ಮೇಲುಗಳೆಂಬ ಭಾವನೆಗೆ ಹಿನ್ನೆಲೆಯಾಗಿ, ಹೆಚ್ಚು ಧನವಿದ್ದವನು ಹೆಚ್ಚಿನವನು ಎಂಬ ಕಲ್ಪನೆಗೆ ಪೀಠಿಕೆಯಾಯಿತು.

**ಬುದ್ಧಿಯುಗ ಅಥವಾ ಬ್ರಾಹ್ಮಣಯುಗ—** ಈ ವೇಳೆಯಲ್ಲಿಯೇ ಇನ್ನೊಂದು ವರ್ಗವೂ ಉದಯವಾಯಿತು. ದಂಡಾಳುಗಳಿಗೆ, ಯುದ್ಧ ಶಿಕ್ಷಣ ಕೊಡುವ ಸಮಾಜದಲ್ಲಿ ಶಾಂತಿಯು ನೆಲೆಸುವಂತೆ ಸಮಾಜದ ಕಟ್ಟುಗಳನ್ನು ನಿರ್ಮಿಸುವ, ರಾಜಪ್ರಜರ ಹಿತಸಂಬಂಧವನ್ನು ಬೋಧಿಸುವ, ಜ್ಞಾನವೃದ್ಧಿಯನ್ನು ಮಾಡುವ ಬುದ್ಧಿಶಾಲಿಯಾದ ಜನಾಂಗವು ಬೆಳಕಿಗೆ ಬಂದಿತು. ಮಾನವನ ಪ್ರಗತಿಯು ಬುದ್ಧಿಯುಗಕ್ಕೆ ಬಂದು ಮುಟ್ಟಿತು. ಸಮಾಜದ ಶಾಂತಿ-ಸುಖಗಳಿಗೆ, ಇಂಥ ಸಮಾಜದ ಆವಶ್ಯಕತೆಯು ಸ್ವಾಭಾವಿಕವಿತ್ತು. ರಾಜನು ಯುದ್ಧ ಮಾಡುವ ವರ್ಗದ ಪಾಲನೆ ಪೋಷಣೆ ಮಾಡುವಂತೆ, ಈ ವರ್ಗದ ಪಾಲನೆ ಪೋಷಣೆಯನ್ನು ಮಾಡುವದು ಕರ್ತವ್ಯವೇ ಆಯಿತು. ಆದರೆ, ಇವರ ಭಾರವೂ ಸ್ವಾಭಾವಿಕವಾಗಿ, ರೈತರ ಮೇಲೆಯೆ ಬಿತ್ತು. ಹೀಗೆ **ಶ್ರಮಜೀವನವಿಲ್ಲದ** ವರ್ಗಗಳು ಬೆಳೆಯತೊಡಗಿದವು.

**ಔದ್ಯೋಗಿಕ-ಯುಗ—** ಮಾನವನು ಒಂದೆಡೆ ನೆಲೆಯೂರಿನಿಂತೊಡನೆಯೇ ಅವನ ಜೀವನದಲ್ಲಿ ಅನೇಕ ಪರಿವರ್ತನೆಗಳಾದವು. ಮೆಲ್ಲ ಮೆಲ್ಲನೆ ಮಾಂಸಾಹಾರವು ಕಾಲ್ತೆಗೆಯಿತು. ಆಹಾರಕ್ಕಾಗಿಯೇ ಅನೇಕ ಸಂಗತಿಗಳ ಆವಶ್ಯಕತೆಯುಂಟಾಗತೊಡಗಿತು. ಪಶುಗಳ ತೊಗಲುಗಳಿಂದ ಮರ್ಯಾದೆಯನ್ನು ಮುಚ್ಚಿಕೊಳ್ಳುತ್ತಿದ್ದ ಅವರಿಗೆ, ಅದು ಮೆಲ್ಲ ಮೆಲ್ಲನೆ ಅಶಕ್ಯವಾಗತೊಡಗಿ, ಮರ್ಯಾದೆಗಾಗಿ ಹೊಸ ಶೋಧ ಮಾಡಬೇಕಾದ ಪ್ರಸಂಗವು ಬಂದೊದಗಿತು. ಹೀಗೆ, ಜೀವನವು ಸುಖಮಯವಾಗಿ ಸಾಗಬೇಕಾದರೆ, ಜೀವನಕ್ಕೆ ಆವಶ್ಯಕವಾದ ಧಾನ್ಯದವಸಗಳ ಹೊರತಾಗಿ ಬೇಕಾದ ಸಾಧನಗಳ ಶೋಧದ ಕಡೆಗೆ, ಮಾನವನ ಬುದ್ಧಿಯು ಹರಿಯತೊಡಗಿತು. ಅನೇಕ ವಸ್ತುಗಳ ಶೋಧಗಳಾದವು. ಅವುಗಳನ್ನು ಜೀವನಕ್ಕೆ ಉಪಯೋಗಿಸುವ ಕಲೆಯೂ ಮೆಲ್ಲನೆ ತಲೆದೋರಹತ್ತಿತು. ನೇಗೆ, ಕುಂಬಾರಿಕೆ, ಕಮ್ಮಾರಿಕೆ, ಬಡಿಗತನ ಮೊದಲಾದ ಬಾಳಿಗೆ ಅಗತ್ಯವಾದ ಉದ್ಯೋಗಗಳು ಉದಯವಾದವು. ಸಮಾಜದ ರಕ್ಷಣೆ ಪೋಷಣೆಗಳಿಗಾಗಿ ಅನೇಕ ಉದ್ಯೋಗ ವ್ಯವಸಾಯಗಳನ್ನು ಕೈಕೊಂಡು ಸಮಾಜಸೇವೆ ಮಾಡುವಂಥ ಅನಂತ ವರ್ಗಗಳು ಉದಯ

ವಾದವು. ಇವರೆಲ್ಲರ ಪೋಷಣೆಯೂ ಒಕ್ಕಲಿಗರ ಮೇಲೆಯೇ ಬಿತ್ತು. ಆದುದರಿಂದ ಒಕ್ಕಲಿಗರು ಹೆಚ್ಚು ಹೆಚ್ಚು ಭೂಮಿಯನ್ನು ಸಾಗುವಳಿ ಹೊಸ ಹೊಸ ಶೋಧಗಳಿಂದ, ಹೆಚ್ಚು ಹೆಚ್ಚು ಬೆಳೆಯನ್ನು ಬೆಳಸುತ್ತಿದರು. ತಾವು ಬೆಳೆದ ಕಾಳುಗಳನ್ನು ಕೊಟ್ಟು, ತಮಗೆ ಉಪಯುಕ್ತವಾದ ಒಡವೆಗಳನ್ನು ಕೊಳ್ಳುತ್ತಿದ್ದರು. ಹೀಗೆ, ಕಾಳೇ ವಿನಿಮಯವಾಗಿ ಉಪಯೋಗಿಸಲ್ಪಡುತ್ತಿತ್ತು. ಈ ಕಾಲದಲ್ಲಿ ಧನದ ಕಲ್ಪನೆಯೂ ಬದಲಾಯಿತು. ಭೂಮಿ, ಧಾನ್ಯದವಸ, ಪಶುಗಳಷ್ಟೇ ಧನವಲ್ಲ, ಜೀವನಕ್ಕೆ ಉಪಯುಕ್ತವಾದ ಸಾಧನಗಳೆಲ್ಲ ಧನವೆಂಬ ಕಲ್ಪನೆಯು ಬರಲಾರಂಭಿಸಿತು.

**ವೈಶ್ಯಯುಗ—** ಒಕ್ಕಲತನ-ಉದ್ಯೋಗಗಳಲ್ಲಿ ನಿರತರಾದ ಜನರಿಗೆ, ಜೀವನಕ್ಕೆ ಉಪಯುಕ್ತವಾದ ಒಡವೆಗಳನ್ನು ದೊರಕಿಸಿಕೊಳ್ಳಲು, ವ್ಯವಸಾಯದ ದೃಷ್ಟಿಯಿಂದ ತೊಂದರೆಯಾಗಹತ್ತಿತು. ಆದುದರಿಂದ ಅವರಿಗೆ ಉಪಯುಕ್ತವಾದ ಒಡವೆಗಳನ್ನು ಒದಗಿಸುವ ಒಂದು ವರ್ಗವು ಅವಶ್ಯವೆನಿಸಿತು. ಉದ್ಯೋಗ ವ್ಯವಸಾಯಗಳ ಜನರಿಗೆ, ಆಹಾರವನ್ನು ಒದಗಿಸಿ, ಅವರು ಸಿದ್ಧಮಾಡಿದ ಸರಕುಗಳನ್ನು, ವಿನಿಮಯವಾಗಿ ತೆಗೆದುಕೊಂಡು, ಯಾರಿಗೆ ಯಾವುದು ಬೇಕೋ ಅದನ್ನು ಅವರಿಗೆ ಸಲ್ಲಿಸುವ ವೈಶ್ಯವರ್ಗವು ಮುಂದೆ ಬಂದಿತು. ಇವರು ಧನೋತ್ಪಾದನೆ ಮಾಡದಿದ್ದರೂ, ವಿನಿಮಯ ಮಾಡುವ ಕಾರ್ಯಕ್ಕಾಗಿ, ಇಬ್ಬರಿಂದಲೂ, ಧನವನ್ನು ಸಂಪಾದಿಸುತ್ತಿದ್ದರು. ಅಂತೂ ಈ ವರ್ಗವೂ ರೈತರಿಂದಲೇ ಉಪಜೀವಿಸುವಂತಹದು.

ಮಾನವನ ಪ್ರಗತಿಯು ಬೆಳೆದಂತೆ ವಿನಿಮಯಗಳೂ ಹೆಚ್ಚಾಗಹತ್ತಿದವು. ಕ್ಷೇತ್ರವಿಸ್ತಾರವಾದಂತೆ, ಧಾನ್ಯದ ವಿನಿಮಯಕ್ಕೆ ತೊಂದರೆ ಎನಿಸಹತ್ತಿತು. ಧಾನ್ಯವು ಬಹುದಿವಸ ಬಾಳುವಂತಹದಲ್ಲ ಕೆಲವು ಕಾಲದ ಮೇಲೆ ನಾಶವಾಗುವಂತಹದು. ಅದ್ದರಿಂದ ವಿನಿಮಯವು ಸುಸೂತ್ರವಾಗಿ ಸಾಗಲು, ಒಂದು ಸಾಧನದ ಆವಶ್ಯಕತೆ ಎನಿಸಿತು. ಮಾನವನು ತನ್ನ ಬುದ್ಧಿಯಿಂದ, ಚಿನ್ನವನ್ನು ಹುಡುಕಿದನು. ಎಷ್ಟೋ ಕಾಲವಿಟ್ಟರೂ

ನಾಶವಾಗದಂಥ ಬೆಲೆಯುಳ್ಳ ಧಾತುವೆಂದೂ, ಜಗತ್ತಿನಲ್ಲಿ ಅತಿ ವಿರಳವೆಂದೂ, ಸಂಗ್ರಹಕ್ಕೆ ಯೋಗ್ಯವಾದುದೆಂದೂ ಬಗೆದು ಅದನ್ನು ಸಾರ್ವದೇಶಿಕ ವಿನಿಮಯವನ್ನಾಗಿ ( Common medium of Exchange ) ಮಾಡಿದನು. ಚಿನ್ನದ ವಿನಿಮಯದಿಂದ ಬೇಕಾದ ಸರಕುಗಳನ್ನು ದೊರಕಿಸಲು ಅನುಕೂಲವಾಯಿತು. ಬಹುದಿವಸ ಬಾಳದ ಧಾನ್ಯವನ್ನು, ಚಿನ್ನದ ರೂಪದಿಂದ ಸಂಗ್ರಹಿಸಲು ಮಾರ್ಗವಾಯಿತು. ಈ ಶೋಧದಿಂದ ಚಿನ್ನವು ಮಾನವನ ವಿಚಾರದಲ್ಲಿಯೂ, ಜೀವನದಲ್ಲಿಯೂ, ಕ್ರಾಂತಿಯುನ್ನುಂಟುಮಾಡಿತು. ಧಾನ್ಯಧನ, ಭೂಮಿ, ಪಶುಗಳಿಗಿದ್ದ ಬಡತನವನ್ನೆಲ್ಲ ತಾನು ವಹಿಸಿ, ಅವುಗಳನ್ನೆಲ್ಲ ತನ್ನ ಗುಲಾಮರನ್ನಾಗಿ ಮಾಡಿತು. ಇದರಿಂದ ಸಾಮಾಜಿಕ ಕ್ರಾಂತಿಗೆ ಆರಂಭವಾಯಿತು.

ಎಲ್ಲ ವರ್ಗದ ಜನರೂ, ತಮ್ಮಲ್ಲಿ ಹೆಚ್ಚಾಗಿ ಯಾವದಾದರೊಂದು ಸರಕು ಇದ್ದರೆ, ಅದನ್ನು ಕೊಟ್ಟು ವಿನಿಮಯಮಾಡಿ, ಬಂಗಾರವನ್ನು ಸಂಗ್ರಹಿಸಹತ್ತಿದರು. ಆಪತ್ತು, ಮುಂದಿನ ಪೀಳಿಗೆಗಳಿಗಾಗಿ, ತಮ್ಮ ಶ್ರಮದ ಫಲವನ್ನು, ಚಿನ್ನದ ರೂಪದಿಂದ ಕೂಡಿಸಹತ್ತಿದರು. ಒಕ್ಕಲಿಗನು, ತನ್ನ ಜೀವನಕ್ಕೆ ಬೇಕಾದಷ್ಟು ಧಾನ್ಯಧನಗಳನ್ನು ಇಟ್ಟುಕೊಂಡು, ಉಳಿದದ್ದನ್ನೆಲ್ಲ ಚಿನ್ನದ ರೂಪದಿಂದ ಕಾದಿಡಹತ್ತಿದನು. ಸಂಗ್ರಹಬುದ್ಧಿಯು ಭರದಿಂದ ಬೆಳೆಯಹತ್ತಿತು. ಮತ್ತು ಇದು ಸಾರ್ವಜನಿಕವಾಯಿತು. **ಇದೇ ಮುಂದಿನ ಯುಗಕ್ಕೆ ಬಾಂಡವಲವಾಯಿತು.** ವ್ಯಾಪಾರಸ್ಥರಿಗೆ, ಚಿನ್ನದಿಂದ ವಿನಿಮಯಕ್ಕೆ ಬಳ್ಳೇ ಅನುಕೂಲತೆಯುಂಟಾಗಿ, ವ್ಯಾಪಾರವು ಭರದಿಂದ ಬೆಳೆಯಹತ್ತಿತು. ಪ್ರಸಂಗದಲ್ಲಿ ವಿನಿಮಯಕ್ಕೆ ಹೆಚ್ಚು ಚಿನ್ನವು ಬೇಕಾದೊಡನೆ, ಪರರಿಂದ ಪಡೆದು ಅದನ್ನು ಉಪಯೋಗಿಸಿದ್ದಕ್ಕಾಗಿ, ತಮ್ಮ ಲಾಭದಲ್ಲಿ ಕೆಲವೊಂದನ್ನು ಕೊಡಹತ್ತಿದರು. **ಹೀಗೆ ಹಣದಿಂದ ಹಣಗಳಿಸುವ ಕಲ್ಪನೆ ಬಂದೊಡನೆಯೇ ಸಂಗ್ರಹಕ್ಕೆ ಪುಟಕೊಟ್ಟಂತಾಯಿತು.** ಎಲ್ಲರೂ ತಮ್ಮಲ್ಲಿರುವ ಹಣ ( ಬಂಡವಲು ) ಉಪಯೋಗಿಸಿ, ಬಂಡವಲವನ್ನು ಬೆಳೆಯಿಸುವ ಹವ್ಯಾಸಕ್ಕೆ ಬಿದ್ದರು. ಇಂಥದೊಂದು ವರ್ಗವೇ ಸಿದ್ಧವಾಯಿತು. **ಇವರೇ ಸಾಹುಕಾರರು.**

ಇವರು ಕೇವಲ, ಬಡ್ಡಿ ವ್ಯವಹಾರಕ್ಕೆ ನಿಲ್ಲಲಿಲ್ಲ. ಧನೋತ್ಪಾದಕ ಸಾಧನಗಳನ್ನು ಹಣದ ಬಲದಿಂದ ವಶಪಡಿಸಿಕೊಳ್ಳುವ ಹಂಬಲಕ್ಕೆ ಬಿದ್ದರು. ಭೂಮಿಗಳನ್ನು ಕೊಳ್ಳಹತ್ತಿದರು. ಹೀಗೆ ಸಾವುಕಾರರೂ ಶ್ರೀಮಂತರೂ, ಪ್ರಕೃತಿದೇವಿಯ ಸಂಪತ್ತಿನ ಮೇಲೆ, ವಿಶೇಷವಾಗಿ ಭೂಮಿಯ ಮೇಲೆ, ಒಡೆತನವನ್ನಿಟ್ಟುಕೊಳ್ಳಹತ್ತಿದರು. ಇದರಿಂದ ಅವರ ಕೈಕೆಳಗೆ ಇತರರು ದಾಸರಾದರು. ಅಥವಾ ಬರೀ ಬಾಡಿಗೆಯನ್ನಾಗಲಿ, ಲಾವಣಿಯನ್ನಾಗಲಿ ತೆರುವ ಒಕ್ಕಲುಗಳಾದರು.

ಇವರು ಉದ್ಯೋಗಗಳಲ್ಲಿ ಕೈಹಾಕಿದೊಡನೆ, ಅಲ್ಲಿಯೂ ಕೂಲಿಕಾರರ ಜೀತದಾಳುಗಳ ವರ್ಗಗಳು ಉಂಟಾದವು. ಇದರಿಂದ ಸಂಪತ್ತಿನ ವರಮಾನಗಳಲ್ಲಿ ಬಹು ಭೇದಗಳು ಉಂಟಾಗಹತ್ತಿದವು. ಸಮಾಜದಲ್ಲಿ ಅಸಮಾನತೆಯು ತಲೆದೋರಹತ್ತಿತು. ಒಡೆತನವು ಬಲಿಯಹತ್ತಿತು. ಈ ಅಸಮಾನತೆಯ ನಿವಾರಣೆಗಾಗಿ, ದಾನಧರ್ಮಗಳ ಕಲ್ಪನೆಗಳು ಉದಯವಾದವು. ತತ್ವದರ್ಶಿಗಳು ರಾಜರಿಗೆ, ಯಜ್ಞಯಾಗಾದಿಗಳನ್ನು ಮಾಡಹಚ್ಚಿದರು. ಇಷ್ಟೆಲ್ಲ ಪರಿಸ್ಥಿತಿಯೊದಗಿದ್ದರೂ, ಒಡೆತನದ ಭೀಕರ ನೃತ್ಯವಿದ್ದಿಲ್ಲ ಯಾಕಂದರೆ ಕೆಲಸಮಾಡುವ ಸ್ವಾತಂತ್ರ್ಯವಿತ್ತು. ತನ್ನವೇ ಆದ ಸಾಧನಗಳಿದ್ದವು. ಕಚ್ಚಾಮಾಲುಗಳು ಪುಕ್ಕಟೆಯಾಗಿ ದೊರೆಯುತ್ತಿದ್ದವು. ಇದರಿಂದ ಬಹು ಸಂಖ್ಯಾಕ ಕಸಬುಗಾರರು ಸ್ವತಂತ್ರ ರೀತಿಯಿಂದ ಮಾಲುಗಳನ್ನು ಸಿದ್ಧ ಮಾಡಿ, ಜೀವಿಸುತ್ತಿದ್ದರು. ಇದರಿಂದ ಧನಿಕರಿಗೆ ಸ್ವತಂತ್ರವಾಗಿ, ಕಾರಖಾನೆಗಳನ್ನು ನಡೆಯಿಸಲು ಹೆಚ್ಚು ಲಾಭವಿರಲಿಲ್ಲ. ಆದ್ದರಿಂದ ಸಮಾಜದಲ್ಲಿ ಹಾಹಾಕಾರ ಎದ್ದಿರಲಿಲ್ಲ.

**ಯಾಂತ್ರಿಕಯುಗ—** ಧನಿಕರ ಧನವು ಮಾನವನನ್ನು ಸುಮ್ಮನೆ ಕೂಡಗೊಡಲಿಲ್ಲ. ಮಾನವನ ರಕ್ತದ ರುಚಿ ಹತ್ತಿದ ಹುಲಿಯು ದಿನಾಲು ಬೇಟೆಯನ್ನು ಹುಡುಕುವಂತೆ, ಈ ಬಂಡವಲುಗಾರರ ತಲೆಯಲ್ಲಿ ಬಂಡವಲವನ್ನು ಹೇಗೆ ಬೆಳೆಸಬೇಕೆಂಬುದೊಂದೇ ಯೋಚನೆ. ಹೀಗೆ ಮಾನವನು ವಿಚಾರ ಮಾಡುತ್ತ ಉಗಿಯ ಶಕ್ತಿಯನ್ನು ಕಂಡುಹಿಡಿದನು. ೧೮ನೇ ಶತಮಾನದ ಮಧ್ಯದಲ್ಲಿ (೧೭೬೫) ಇಂಗ್ಲಂಡದಲ್ಲಿ **ಜೇಮ್ಸ ವ್ಯಾಟನು**

ಉಗಿಯಿಂದ ಎಂಜಿನವನ್ನು ಸಿದ್ಧಮಾಡಿ, ಪಶುಬಲದಂತೆ ಅದನ್ನು ಉಪಯೋಗಿಸಲು ಬರುವದೆಂದು ಸಿದ್ಧಮಾಡಿದನು. ವೈಜ್ಞಾನಿಕರು ತಮ್ಮ ಶೋಧದಿಂದ, ನೂಲುವದು, ನೇಯುವದು, ಹಡಗ, ರೈಲು, ಮುದ್ರಣ, ಅಗಿಯುವದು ಇತ್ಯಾದಿ ನಾನಾಬಗೆಯ ಅಸಂಖ್ಯ ಕೆಲಸಗಳಿಗೆ ಉಗಿಯ ಯಂತ್ರಗಳನ್ನು ಉಪಯೋಗಿಸಬಹುದೆಂದು ಕಂಡುಹಿಡಿದು, ಅಂಥ ಸಾಧನಗಳನ್ನು ಸಿದ್ಧಪಡಿಸಿದರು. ಧನಿಕರ ಕೈಗೆ ಕಾಮಧೇನುವೇ ಸಿಕ್ಕಂತಾಯಿತು.

ಜಗತ್ತಿನಲ್ಲಿ ಈ ಉಗಿಯ ಯಂತ್ರದ ಹುಟ್ಟಿನೊಡನೆಯೇ ಬಂಡವಳವಾದದ ಹುಟ್ಟೂ ಇದೆ.

ಮಾನವನು ಹುಟ್ಟಿಸುವ ಸರಕುಗಳ ಎಷ್ಟೋಪಟ್ಟು ಸರಕುಗಳನ್ನು ಅಷ್ಟೇ ಅವಧಿಯಲ್ಲಿ ಯಂತ್ರವು ಹುಟ್ಟಿಸುತ್ತದೆ. ನಿಪುಣನಾದ ನೇಕಾರನು ದಿನಕ್ಕೆ ಮಗ್ಗದ ಮೇಲೆ ೮-೧೦ ಗಜ ಅರಿವೆಯನ್ನು ಸಿದ್ಧಪಡಿಸುತ್ತಿದ್ದರೆ, ಅದೇ ಮಗ್ಗದ ಮೇಲೆ ಉಗಿಯಿಂದ ಅಜ್ಞನಾದ ಒಬ್ಬ ಮನುಷ್ಯನು, ನೂರಾರು ಗಜ ಅರಿವೆಯನ್ನು ಹುಟ್ಟಿಸಲು ಶಕ್ತನಾಗುತ್ತಾನೆ. ಇದರಿಂದ, ಸ್ವಾಭಾವಿಕವಾಗಿ ಯಂತ್ರದಿಂದ ಸಿದ್ಧವಾದ ಸರಕು ಅಗ್ಗವಾಗುವದು. ಯಾಕಂದರೆ ಸರಕಿನ ಬೆಲೆಯು ಅದಕ್ಕಾಗಿ ದುಡಿಯುವ ಮನುಷ್ಯನ ದುಡಿಮೆಯನ್ನು ಅವಲಂಬಿಸಿರುತ್ತದೆ. ಮಾಲು ಅಗ್ಗವಾದಂತೆ ಅದು ಬಹು ಬೇಗನೆ ಮಾರಾಟವಾಗುತ್ತದೆ. ಮಾರಾಟವಾದಂತೆ ಸರಕಿನ ಮೇಲೆ, ಸ್ವಲ್ಪಲಾಭವೆಂದರೂ, ಉತ್ಪತ್ತಿಯು ಹೆಚ್ಚಿರುವದರಿಂದ ಅತ್ಯಂತ ಲಾಭವಾಗುತ್ತದೆ. ಹೀಗೆ ಬಹು ಲಾಭವಾಗುತ್ತಿದ್ದರೂ, ಯಂತ್ರದ ಬೆಲೆಯು ಹೆಚ್ಚು ಇರುವದರಿಂದ ಕಲಾಕುಶಲರು ಅದನ್ನು ಕೊಳ್ಳಲು ಅಸಮರ್ಥರಾಗುವರು. ಹೀಗೆ ಬಂಡವಳವಾದವು ಉಗಿಯ ಯಂತ್ರಗಳ ಹುಟ್ಟಿನೊಡನೆಯೇ ಹುಟ್ಟುತ್ತದೆ. ಧನಿಕರು, ತಮ್ಮ ಧನದಿಂದ ಯಂತ್ರಗಳನ್ನು ಸಿದ್ಧಪಡಿಸುವದರಲ್ಲಿಯೂ, ವಿಪುಲವಾಗಿ ಸರಕುಗಳನ್ನು ಹುಟ್ಟಿಸಿ, ಮಾರಾಟಮಾಡುವದರಲ್ಲಿಯೂ, ತೊಡಗಿದರು. ಸಾವಿರಾರು ಜನರು ದುಡಿಯುವಷ್ಟು ಒಂದು ಯಂತ್ರವು

ನಡಿಯುತ್ತಿತು. ಗಿರಣಿಯಲ್ಲಿ ದುಡಿಯುವ ಕೂಲಿಕಾರರಿಗೆ ಜೀವನಕ್ಕೆ ಸಾಲುವಷ್ಟು ಮಾತ್ರ ಕೊಟ್ಟು ದುಡಿಸಿಕೊಳ್ಳುತ್ತಿದ್ದರು. ಕೂಲಿಕಾರರ ಶ್ರಮದ ಲಾಭವೆಲ್ಲ ಬಂಡವಾಲು ಬೆಳಸುವವರಲ್ಲಿಯೇ! ಯಂತ್ರದ ಒಡೆಯರಾದ ಧನಿಕರು ವರ್ಷವರ್ಷಕ್ಕೂ, ತಮ್ಮ ಬಂಡವಾಳವನ್ನು, ಬೆಳೆಸುತ್ತ ಬೆಳೆಸುತ್ತ ಕುಬೇರರೇ ಆಗುತ್ತಿದ್ದರು. ಧನವು ಧನವನ್ನು ಸೆಳೆಯುತ್ತಿತು. ಒಬ್ಬನಿಗಿಂತಲೂ ಇನ್ನೊಬ್ಬನು ಹೆಚ್ಚು ಗಳಿಸಬೇಕೆಂಬ ಹೋರಾಟವು ಪ್ರಾರಂಭವಾಗಿ, ಹೆಚ್ಚು ಹೆಚ್ಚು ಹಣಕೂಡಿಸಿ, ದೊಡ್ಡ ದೊಡ್ಡ ಕಾರಖಾನೆಗಳನ್ನು ತೆರೆಯುತ್ತಿದ್ದರು. ಈ ಮಾತು ಇಷ್ಟಕ್ಕೆ ನಿಲ್ಲದೆ ರಾಷ್ಟ್ರ ರಾಷ್ಟ್ರಗಳ ಸೆಣಸಾಟಕ್ಕೆ ಆರಂಭವಾಯಿತು. ಹೀಗೆ ಜಗತ್ತಿನಲ್ಲೆಲ್ಲ, ಧನಸುಲಿಗೆಯೇ ಸುಲಿಗೆ, ತಗ್ಗಿದ್ದಲ್ಲಿಯೇ ನೀರು ನಿಲ್ಲುವಂತೆ, ಜಗತ್ತಿನ ಧನಪ್ರವಾಹವು ಧನಿಕರ ಕಡೆಗೇ ಹರಿಯುತ್ತಿದೆ. ಹೀಗೆ ಜಗತ್ತಿನ ಸಂಪತ್ತನ್ನೆಲ್ಲ ಹರಣಮಾಡಿ ಕೋಟ್ಯಧಿಪ ಜನರ ಹೊಟ್ಟೆಯ ಮೇಲೆ ಕಾಲುಕೊಟ್ಟು, ಸಾಮ್ರಾಜ್ಯಗಳನ್ನು ಕುಣಿಸಹತ್ತಿದ ಬಂಡವಾಳವಾದದ ಭೂತಚೇಷ್ಟೆಗಳನ್ನು ಮುಂದಿನ ಪ್ರಕರಣದಲ್ಲಿ ವಿವರಿಸುತ್ತೇನೆ.



# ಬಂಡವಲವಾದದ ಭೂತಚೇಷ್ಟೆಗಳು

●

೩

**ಕಿಕ್ಕಿರಿ ತುಂಬಿದೆ ಭೂಮಿಯು ಕಣಜ**
**ಕಕ್ಕಸಬಡುತಿದೆ, ಬೊಕ್ಕಸದೊಡಲು**
**ಬಾಳಿಗಿಂತಲೂ, ಕೂಳೇ ಮೇಲೊ ?**
**ಬರಿದೋ ಬರಿದು ತೆರವೋ ತೆರವು**
**ಬಡವರ ಬಗ್ಗರ ತುತ್ತಿನ ಚೀಲ**

— ಪ್ರ. ದ. ರಾ. ಬೇಂದ್ರೆ

ಬಂಡವಲವಾದವು ಯಂತ್ರಗಳ ಸಹಾಯದಿಂದ ಜಗತ್ತಿನಲ್ಲಿ ಅನರ್ಥ ಪರಂಪರೆಗಳನ್ನೇ ನಡೆಯಿಸಿದೆ. ಅದರ ರಾಕ್ಷಸೀಮಹತ್ವಾಕಾಂಕ್ಷೆಯು, ಜಗತ್ತನ್ನು ಎಲ್ಲಿಗೆ ಒಯ್ಯುವದೋ ಎಂಬುದನ್ನರಿಯುವದು, ಮಹಾಮಹಾಮುತ್ಸದ್ದಿಗಳಿಗೂ ಕಠಿಣವಾಗಿದೆ. ಬಡವರ ಬಡತನದ ಬೇಗೆಯು ಜಗತ್ತನ್ನೇ ಸುಡುವದು. ಎಚ್ಚರಿಕೆ! ಎಚ್ಚರಿಕೆ!! ಎಂದು, ತತ್ವಜ್ಞಾನಿಗಳು, ಕೂಗುತ್ತಲಿದ್ದಾರೆ. ಈ ಪ್ರಳಯವನ್ನುಂಟುಮಾಡುವ ಕಾರಣಗಳಾವು? ಬಂಡವಲವಾದವು ಏನು ಚೇಷ್ಟೆಯನ್ನು ನಡೆಯಿಸಿದೆ? ಎಂಬುದನ್ನು ತಿಳಿದುಕೊಂಡು ಪಾರಾಗುವ ಹಂಚಿಕೆಗಳನ್ನು ಹೂಡುವದು ಅಗತ್ಯವಾಗಿದೆ.

**ಸ್ವಾತಂತ್ರ್ಯದ ಕೊಲೆ ಮತ್ತು ಕೈಗಾರಿಕೆಗಳ ನಾಶ**- ಯಾಂತ್ರಿಕ ಯುಗವು ಉದಯವಾಗುವದಕ್ಕಿಂತ ಮೊದಲು, ಕಲಾಕುಶಲನಾದ ಮನುಷ್ಯನು, ತನ್ನ ಶ್ರಮದಿಂದ ಸರಕುಗಳನ್ನು ಉತ್ಪನ್ನ ಮಾಡಿ, ಯಾರ ಹಂಗೂ ಇಲ್ಲದೆ, ಸ್ವತಂತ್ರವಾಗಿ ಜೀವಿಸುತ್ತಿದ್ದನು. ಮಾನವನ ಜೀವನಕ್ಕೆ ಅಗತ್ಯವಾದ ವಸ್ತುಗಳ ಪೂರೈಕೆಯು ತಕ್ಕಷ್ಟು ಇದ್ದುದರಿಂದ

ಅವರಿಗೆ ಸಾಕಷ್ಟು ಧನವು ದೊರಕುತ್ತಿತ್ತು. ಇದಲ್ಲದೆ ತಮ್ಮವೇ ಆದ ಸಾಧನಗಳಿದ್ದುವು. ಕೆಲಸ ಮಾಡುವ ಸ್ವಾತಂತ್ರ್ಯವಿತ್ತು. ಕಚ್ಚಾ ಮಾಲುಗಳು ಅಗ್ಗವಾಗಿ ದೊರೆಯುತ್ತಿದ್ದವು. ಇದರಿಂದ ಸ್ವತಂತ್ರ ಜೀವನಕ್ಕೆ ಎಡೆಯಿತ್ತು. ಜೀವನಕ್ಕಾಗಿ ಪರರನ್ನು ಅವಲಂಬಿಸುವ ಕಾರಣವಿರಲಿಲ್ಲ. ಆದರೆ ಯಂತ್ರವು ಈ ಮನುವನ್ನೇ ಬದಲುಮಾಡಿತು. ಯಾವದೊಂದು ವಸ್ತುವಿನ ಬೆಲೆಯು ಮನುಷ್ಯನ ಶ್ರಮವನ್ನೇ ಅವಲಂಬಿಸಿರುತ್ತದೆ. ಅವನು ಹೆಚ್ಚು ದುಡಿದಷ್ಟು ಅದರ ಬೆಲೆಯು ಹೆಚ್ಚಾಗುತ್ತದೆ. ಆದ್ದರಿಂದಲೆ, ಮನುಷ್ಯನ ಕೈಯಿಂದ ಹುಟ್ಟಿದ ಸರಕಿನ ಬೆಲೆಯು ಹೆಚ್ಚಿರುತ್ತದೆ. ಮಾನವಶಕ್ತಿಯ ಉಪಯೋಗವು ಕಡಿಮೆಯಾದಂತೆ, ಆ ಸರಕಿನ ಬೆಲೆಯೂ ಕಡಿಮೆಯಾಗುವದು ಸ್ವಾಭಾವಿಕ.

ಈ ತತ್ವವನ್ನು ಕಣ್ಣುಮುಂದೆ ಇಟ್ಟುಕೊಂಡೇ ಯಂತ್ರಗಳು ರಚಿಸಲ್ಪಟ್ಟವು. ಯಂತ್ರಗಳ ಮುಖ್ಯ ಧ್ಯೇಯವೆಂದರೆ, ಮಾನವನ ಶಕ್ತಿಯನ್ನು ಎಷ್ಟು ಕಡಿಮೆ ಉಪಯೋಗಿಸಲು ಶಕ್ಯವೋ ಅಷ್ಟು ಕಡಿಮೆ ಉಪಯೋಗಿಸುವದು.

ಯಂತ್ರಗಳಿಂದ ಉತ್ಪನ್ನವಾದ ಸರಕುಗಳ ಬೆಲೆಯು, ಕಡಿಮೆಯಾಗುವದು ಸ್ವಾಭಾವಿಕವಾಗಿದೆ. ಇದಲ್ಲದೆ ಯಂತ್ರದಿಂದ ಉತ್ಪಾದಕ ಶಕ್ತಿಯೂ ಬೆಳೆಯಿತು. ಉದಾಹರಣೆಗಾಗಿ ಮಗ್ಗದ ಕೆಲಸವನ್ನೇ ತೆಗೆದುಕೊಳ್ಳೋಣ. ನಿಪುಣನಾದ ನೇಕಾರನು, ದಿನಾಲು ಅತ್ಯಂತ ಶ್ರಮವಹಿಸಿ, ೮ ತಾಸು ದುಡಿದು ೮–೧೦ ಗಜ ಅರಿವೆಯನ್ನು ನೇಯಬಹುದು. ಆದರೆ ಸಾಧಾರಣ ಜ್ಞಾನವುಳ್ಳ ನೇಕಾರನು, ಅಷ್ಟೇ ಸಮಯದಲ್ಲಿ ಶ್ರಮವಿಲ್ಲದೆ ೬೦–೭೦ ಗಜ ಅರಿವೆಯನ್ನು ಯಂತ್ರದಲ್ಲಿ ಹುಟ್ಟಿಸಬಹುದು. ಇದೂ ಅಲ್ಲದೆ, ಯಂತ್ರಗಳ ಸುಧಾರಣೆಯು ಹೆಚ್ಚಾದಂತೆ ಉತ್ಪಾದಕ ಶಕ್ತಿಯೂ ಹೆಚ್ಚುವದು. ಇದರ ಅರ್ಥವಿಷ್ಟೆ! ೧೦ ಜನರು ಉತ್ಪನ್ನ ಮಾಡುವಷ್ಟು ಸರಕನ್ನು ಒಬ್ಬನೇ ಉತ್ಪನ್ನ ಮಾಡುವನು. ಉಳಿದ ೯ ಜನರ ಹೊಟ್ಟೆಯ ಮೇಲೆ ಕಾಲು ಕೊಡುವನು.

ಯಂತ್ರಗಳಿಂದ ವಿಪುಲವಾಗಿ ಹುಟ್ಟಿದ ಈ ಸರಕುಗಳು ಅಗ್ಗವಾಗಿರುವದು ಸ್ವಾಭಾವಿಕ. ಅಗ್ಗವಾದುದನ್ನು ಕೊಳ್ಳುವದು ಮಾನವನ

ಸ್ವಭಾವ. ಅದರಿಂದ ಕೈಯಿಂದಾದ ಒಡವೆಗಳಿಗೆ ಗಿರಾಕಿಗಳು ದೊರೆಯು ದಾದವು. ಕಲಾಕುಶಲರು ಚಿಂತೆಗೊಳಗಾಗಬೇಕಾಯಿತು. ಕಾರ್ಯ ವನ್ನು ನಿಲ್ಲಿಸುವ ಪ್ರಸಂಗ ಬಂದಿತು. ಕಲೆಯು ಜ್ಞಾನದ ಉಪಯೋಗ ವನ್ನು ಮಾಡಿಕೊಂಡು, ಯಂತ್ರಗಳಿಂದ ಬೆಡಗುಳ್ಳ ಸರಕುಗಳನ್ನು ನಿರ್ಮಿಸಹತ್ತಿದರು. ಯಂತ್ರದ ಮುಂದೆ ಕೈಗಾರಿಕೆಗಳು ತೂಗ್ಯಾಲೂ ರಿದವು. ಅಗ್ಗವಾದ ಮ್ಯಾಂಚೆಸ್ಟರ ಮಲಮಲಿನ ಮುಂದೆ ಢಾಕಾದ ಮಲಮಲವು ಹೇಗೆ ಬಾಳಬೇಕು? ಉದ್ಯೋಗಗಳು ಕಟ್ಟಾಗುವ ಪ್ರಸಂಗ ಬಂದೊದಗಿತು. ಕಸಬುಗಾರರು ಯಂತ್ರಗಳನ್ನು ಕೊಂಡು ಉದ್ಯೋಗ ನಡಿಸಬೇಕೆಂದರೆ ಯಂತ್ರಗಳ ಬೆಲೆಯು ವಿಪರೀತ. ಹೀಗೆ ಉತ್ಪಾದಕ ಸಾಧನಗಳಿಗೂ ಅವರು ಎರವಾಗಬೇಕಾಯಿತು. ಅವು ಬಂಡವಲಗಾರರ ಸ್ವಾಧೀನವಾದವು. **ಅವರ ಸ್ವತಂತ್ರ ಜೀವನವು ಹಾಳಾಯಿತು.** ತಮ್ಮ ಜೀವನಕ್ಕೆ ಕೂಲಿಗಳಾಗಿ, ಗಿರಣಿಗಳಲ್ಲಿ ದುಡಿಯುವದೊಂದೇ ಮಾರ್ಗವು ಅವರಿಗೆ ಉಳಿಯಿತು.

ಯಂತ್ರಗಳು ನೇಯ್ಗೆಯಲ್ಲಿ ಕೈಯಿಟ್ಟೊಡನೆಯೇ ಮಗ್ಗಗಳು ಮಾಯವಾಗಹತ್ತಿದವು. ಕಮ್ಮಾರಿಕೆಯಲ್ಲಿ ಕಾಲಿಟ್ಟೊಡನೆಯೇ ಕುಲುಮೆ ಗಳು ಬೂದಿಯಾದವು. ಒಕ್ಕಲತನದಲ್ಲಿ ಹೊಕ್ಕೊಡನೆಯೇ ಒಕ್ಕಲಿಗರು ಬಿಕ್ಕಿಗಳಾದರು. ಹೀಗೆ ಯಂತ್ರಗಳಿಗೆ ಎಲ್ಲರೂ ಆಹುತಿಯಾಗಿ, **ಕೈಗಾ-ರಿಕೆಗಳು ನಾಶವಾದವು.** ಕಲಾಕುಶಲರು ತಮ್ಮ ಸ್ವಾತಂತ್ರ್ಯ-ಜೀವನ ವನ್ನು ಕಳೆದುಕೊಂಡು, ನಿರುದ್ಯೋಗಿಗಳಾಗಿ, ಹೊಟ್ಟೆಗಾಗಿ ಬಂಡವಲ ಗಾರರ ಗುಲಾಮರಾದರು.

**ಕ್ರಾಂತಿ:—** ಯಂತ್ರಗಳು ತಮ್ಮನ್ನು ನಿರುದ್ಯೋಗಿಗಳನ್ನಾಗಿ ಮಾಡುವವೆಂದು ತಿಳಿಯಲು ಜನರಿಗೆ ಬಹಳ ಸಮಯ ಬೇಕಾಗಲಿಲ್ಲ. ಉದ್ಯೋಗಗಳ ಮೇಲೆ ಗದೆ ಬಂದೊಡನೆಯೇ ಅವರು ರೊಚ್ಚಿಗೆದ್ದರು. ಇಂಗ್ಲಂಡದಲ್ಲಿ ಕ್ರಾಂತಿಕಾರಕ ವಿಚಾರಗಳು ಮೊದಲು ತಲೆದೋರಿದವು. ತಮ್ಮ ಜೀವನವನ್ನು ಹಾಳುಮಾಡುವ ಯಂತ್ರಗಳನ್ನೂ ಅವುಗಳ ಒಡೆಯರನ್ನೂ ಧ್ವಂಸಮಾಡುವ ಪ್ರವೃತ್ತಿಯು ಉಂಟಾಯಿತು.

ಕಾರಖಾನೆಗಳು ಕಿತ್ತೊಗೆಯಲ್ಪಟ್ಟವು. ಬಂಡವಲಗಾರರ ಕೊಲೆಗೆ ಆರಂಭವಾಯಿತು. ಹೀಗೆ ರಾಷ್ಟ್ರದಲ್ಲಿ ಕೊಲೆಸುಲಿಗೆಗಳಾಗಹತ್ತಿದವು. ೧೮ನೇ ಶತಮಾನದ ಕೊನೆಯ ೧೯ ನೇ ಶತಮಾನದ ಮೊದಲಿನ ಇಂಗ್ಲಂಡದ ಇತಿಹಾಸದ ಪುಟಗಳು ಇಂಥ ಕ್ರಾಂತಿಯಿಂದಲೇ ತುಂಬಿವೆ.

ಮೊದಮೊದಲು ಕೇವಲ ಮನೆಯಲ್ಲಿದ್ದ ಬಂಡವಲವನ್ನು ದುಡಿತಕ್ಕೆ ಹಚ್ಚಿ ಲಾಭ ಪಡೆಯಬೇಕೆಂಬ ಬುದ್ಧಿಯಿಂದ ಕಾರಖಾನೆಗಳು ತೆರೆಯಲ್ಪಟ್ಟವು. ಅವುಗಳಿಂದ ಲಾಭವು ಸಿಕ್ಕುತ್ತದೆಂದು ಸಿದ್ಧವಾದ ಬಳಿಕ ಧನದ ಆಶೆಯಿಂದ ಹೊಸ ಹೊಸ ಕಾರಖಾನೆಗಳು ಪ್ರಾರಂಭಿಸಲ್ಪಡಹತ್ತಿದವು. ನಿರುದ್ಯೋಗಿಗಳನ್ನು ಕಾರ್ಯಕ್ಕೆ ಹಚ್ಚಿ ಹೆಚ್ಚು ಲಾಭ ಪಡೆಯಬೇಕೆಂಬುದೇ ಅವರ ಮಹತ್ವಾಕಾಂಕ್ಷೆ. ಹೆಚ್ಚು ಹೆಚ್ಚು ಕಾರಖಾನೆಗಳು ಹೊರಟಂತೆ ಹೆಚ್ಚು ಹೆಚ್ಚು ಜನರು ನಿರುದ್ಯೋಗಿಗಳಾಗಹತ್ತಿದರು. ನಿರುದ್ಯೋಗಿಗಳು ಬೆಳೆದ ಪ್ರಮಾಣದಿಂದ ಅವರನ್ನು ಸಮಾಧಾನಗೊಳಿಸುವದಕ್ಕಾಗಿ ಅವರಿಗೆ ಕೆಲಸ ಕೊಡಲು, ಯಂತ್ರಸಾಮಗ್ರಿಗಳೂ ಹೆಚ್ಚು ಬೇಕಾಯಿತು. ಆ ಪ್ರಮಾಣದಿಂದ ದೊಡ್ಡ ಬಂಡವಲವೂ ಬೇಕಾಗಹತ್ತಿತು. ಬಂಡವಲುಗಾರರೆಲ್ಲರೂ ಬಂಡವಲು ಹಾಕಿ ದೊಡ್ಡ ದೊಡ್ಡ ಕಾರಖಾನೆಗಳನ್ನು ತೆಗೆಯಹತ್ತಿದರು. ಹೊಟ್ಟೆಗೆ ಸಿಕ್ಕರೆ ಸಾಕು ಎಂದು ಅಲೆದಾಡುವ ನಿರುದ್ಯೋಗಿಗಳು ಕೇವಲ ಅಲ್ಪವೇತನದಿಂದ ದುಡಿಯಹತ್ತಿದರು. ಒಬ್ಬರಿಗಿಂತಲೂ ಒಬ್ಬರು ಹೆಚ್ಚು ಲಾಭ ದೊರಕಿಸಬೇಕೆಂದು ಕಾರಖಾನೆ ಕಾರಖಾನೆಗಳಲ್ಲಿ ಹೋಲಾಟಕ್ಕೆ (competition) ಪ್ರಾರಂಭವಾಯಿತು. ದೊಡ್ಡ ಕಾರಖಾನೆಗಳು ಸಣ್ಣ ಕಾರಖಾನೆಗಳ ತಲೆಯ ಮೇಲೆ ಕೈಯಿಡಹತ್ತಿದವು. ಇದರಿಂದ ಅವರಲ್ಲಿಯೂ ಅಸಂತೋಷವು ಬೆಳೆಯತೊಡಗಿತು. ಇತ್ತ ಸರಕುಗಳ ಹುಟ್ಟುವಿಕೆಯು ಹೆಚ್ಚಾದ್ದರಿಂದ ಲಾಭವು ಕಡಿಮೆಯಾಗಿ, ಕೂಲಿಯ ದರವು ಇಳಿಯತೊಡಗಿತು. ಮೊದಲೇ ದರಿದ್ರರಾದ ಕೂಲಿಕಾರರ ಸ್ಥಿತಿಯು ಅತ್ಯಂತ ಹೀನವಾಗತೊಡಗಿತು. ಆದರೆ ಬಂಡವಲವು ಮಾತ್ರ ಇದರ ವ್ಯಸ್ತಪ್ರಮಾಣದಲ್ಲಿ ಬೆಳೆಯತೊಡಗಿತು. ಜನಸಂಖ್ಯೆಯ ಬೆಳವಣಿಗೆಯೊಡನೆಯೇ ನಿರುದ್ಯೋಗವು ಮಿತಿಮೀರಿ ಬೆಳೆಯಹತ್ತಿದ್ದರಿಂದ ರಾಷ್ಟ್ರದಲ್ಲಿ ಅಸಂತೋಷವು ಬೆಳೆಯಿತು.

**ಸಾಮ್ರಾಜ್ಯವಾದ:—** ಬಂಡವಲವಾದವು ಕೈಗಾರಿಕೆಗಳನ್ನು ಸುಂಗಿ ಸೀರು ಕುಡಿದರೂ ಅದರ ಧನದ ತೃಷೆಯು ತೃಪ್ತಿಯಾಗಲಿಲ್ಲ. ಅದು ತನ್ನ ಕೈಯನ್ನು ಮುಂದಮುಂದಕ್ಕೆ ಚಾಚಹತ್ತಿತು. ಕಾರಖಾನೆ-ಕಾರಖಾನೆಗಳಲ್ಲಿ ಮೇಲಾಟವು ಪ್ರಾರಂಭವಾದುದರಿಂದ, ಸರಕುಗಳ ಉತ್ಪತ್ತಿಯು ಮಿತಿಮೀರಿ ಬೆಳೆದರೂ, ಕೊಳ್ಳುವವರ ಸಂಖ್ಯೆಯು ಬೆಳೆಯುವ ಬಗೆ ಹೇಗೆ? ಸರಕುಗಳಿಗಾಗಿ ಹೊಸ ಹೊಸ ಪೇಟೆಗಳನ್ನು ಹುಡುಕಲೇ ಬೇಕಾಯಿತು. ಜನಸಂಖ್ಯೆಯು ಮಿತಿಮೀರಿ ಬೆಳೆದುದರಿಂದ ನಿರುದ್ಯೋಗವು ಹೆಚ್ಚಾದ್ದರಿಂದ ರಾಷ್ಟ್ರದ ಶಾಂತತೆಗಾಗಿ ಹೊಸ ಹೊಸ ವಸಹಾತುಗಳನ್ನು ಹುಡುಕುವ ಪ್ರಸಂಗವು ಒಂದೊದಗಿತು. ಹೀಗೆ ಯುರೋಪದ ಪ್ರಬಲ ರಾಷ್ಟ್ರಗಳೆಲ್ಲವೂ ಈ ಸಾಹಸಕ್ಕೆ ಬಿದ್ದವು. **ಇದೇ ಸಾಮ್ರಾಜ್ಯವಾದದ ಹುಟ್ಟು.** ಇದರೊಂದಿಗೆ ಬಂಡವಲವಾದವೂ ಶಿಖರಕ್ಕೆ ಮುಟ್ಟಿತು. ವ್ಯಾಪಾರಿ ಕಂಪನಿಗಳು ಹುಟ್ಟಿದವು. ವ್ಯಾಪಾರದ ಅನುಕೂಲತೆಗಾಗಿ ರೇಲ್ವೆ ಕಂಪನಿಗಳೂ ಹಡಗಗಳ ಕಂಪನಿಗಳೂ ಮುಂದೆ ಬಂದವು. ಜಗತ್ತಿನ ಒಂದು ಮೂಲೆಯಿಂದ ಮತ್ತೊಂದು ಮೂಲೆಗೆ ಸರಕುಗಳು ಮುಟ್ಟುವುದಕ್ಕೆ ಮಾರ್ಗವಾಯಿತು. ಸರಕುಗಳಿಗಾಗಿ ಬೇರೆ ಬೇರೆ ಪೇಟೆಗಳು ಆಕ್ರಮಿಸಲ್ಪಟ್ಟವು. ವ್ಯಾಪಾರವು ನಿರಂಕುಶವಾಗಿ ಸಾಗುವದಕ್ಕಾಗಿ, ಪ್ರಭುತ್ವದ ಅವಶ್ಯಕತೆಯುಂಟಾಯಿತು. ಪ್ರಭುತ್ವವನ್ನು ಕಾಯ್ದುಕೊಳ್ಳಲು ಸೈನ್ಯದ ಅವಶ್ಯಕತೆ. ಹೀಗೆ ಸ್ವತಂತ್ರ ರಾಷ್ಟ್ರಗಳ ಸ್ವಾತಂತ್ರ್ಯವನ್ನು ಹರಣಮಾಡಿ, ಅವುಗಳನ್ನು ಗೆದ್ದು ಅಧೀನ ರಾಷ್ಟ್ರಗಳನ್ನು ಮಾಡಿಕೊಂಡರು. ಈ ರಾಷ್ಟ್ರಗಳು ತಮ್ಮ ಪಕ್ಕಾ ಮಾಲುಗಳಿಗಾಗಿ ತಮ್ಮನ್ನೇ ಅವಲಂಬಿಸಬೇಕೆಂಬ ಧೋರಣವನ್ನಿಟ್ಟುಕೊಂಡು ರಾಜ್ಯಭಾರವನ್ನು ಹೂಡಿದವು. ಬ್ರಿಟಿಶರು ಭಾರತದಲ್ಲಿಯ ಉದ್ಯೋಗಗಳನ್ನು ನಾಶಮಾಡಿದ್ದರ ಮರ್ಮವು ಇದೇ. ಪರರಾಷ್ಟ್ರಗಳಲ್ಲಿಯ ಉದ್ಯೋಗಗಳನ್ನು ಕೊಂದು ಅಲ್ಲಿಯ ಸಂಪತ್ತಿನ ಸುಲಿಗೆಗೆ ಪ್ರಾರಂಭವಾಯಿತು. ಹೀಗೆ ಬಂಡವಲವಾದದ ಸಾಮ್ರಾಜ್ಯಗಳು ಹುಟ್ಟಹತ್ತಿದವು.

ಸಾಮ್ರಾಜ್ಯವಾದವು ಬಂಡವಲವಾದದ ಮಗುವಾಗಿ ಹುಟ್ಟಿ ಬೆಳೆ

ಯಿತು. ಸಾಮ್ರಾಜ್ಯದಲ್ಲಿರುವ ದೇಶಗಳಿಗೆಲ್ಲ ಪಕ್ಕಾ ಸರಕುಗಳನ್ನು ಒದಗಿಸಿಕೊಡುವ ಹಕ್ಕು ನಮ್ಮದು, ಅವುಗಳ ಆರ್ಥಿಕ ಸುಲಿಗೆಯನ್ನು ಮಾಡುವ ಅಧಿಕಾರ ನಮಗೆ ಮಾತ್ರವಿದೆ ಎಂಬ ಸಿದ್ಧಾಂತಗಳನ್ನು ಮುಂದಿಟ್ಟುಕೊಂಡು ಬಂಡವಲವಾದವು ಸಾಮ್ರಾಜ್ಯವಾದವನ್ನು ಬೆಳೆಸುತ್ತಲೇ ಬಂದಿತು. ಈ ರಾಷ್ಟ್ರಗಳ ಔದ್ಯೋಗಿಕ ಉನ್ನತಿಯು ಶಿಖರಕ್ಕೆ ಮುಟ್ಟಿ ಬಂಡವಲವು ಮಿತಿಮೀರಿ ಬೆಳೆದು, ಅದನ್ನು ಏನು ಮಾಡಬೇಕೆಂಬ ಇತಿಮಿತಿಯುಂಟಾಯಿತು. ಬಂಡವಲವಾದವು ಇನ್ನೂ ಒಂದು ಹೆಜ್ಜೆ ಮುಂದಕ್ಕಿಟ್ಟಿತು. ತಮ್ಮ ನಾಡುಗಳಲ್ಲಿ ಇನ್ನು ಯಾವ ಉದ್ಯೋಗವನ್ನೂ ಬೆಳೆಸಿ ಅರ್ಥ ಶೋಷಣೆ ಮಾಡಲು ಅನುವು ಇಲ್ಲದ್ದನ್ನು ಕಂಡು ಸಾಮ್ರಾಜ್ಯಾಂತರ್ಗತ ದೇಶಗಳಲ್ಲಿಯೇ ಬಂಡವಲ ಹಾಕಿ, ಶಕ್ಯವಿದ್ದಷ್ಟು ಸುಲಿಗೆ ಮಾಡಬೇಕೆಂಬ ಹಂಬಲಕ್ಕೆ ಬಿದ್ದವು. ಇದರಿಂದ ಸಾಮ್ರಾಜ್ಯಾಂತರ್ಗತ ರಾಷ್ಟ್ರಗಳಲ್ಲಿ ನಿರುದ್ಯೋಗವೂ ಬಡತನವೂ ತಲೆಯೆತ್ತಿ ನೃತ್ಯಮಾಡಹತ್ತಿದವು. ಈ ಬಂಡವಲದಾರರಿಗೆ ಅನುಕೂಲವಾಗಬೇಕೆಂದು, ಸಾಮ್ರಾಜ್ಯದಲ್ಲಿಯ ಬಂಡವಲಗಾರರು ಉದ್ಯೋಗಗಳನ್ನು ಕೈಕೊಳ್ಳದಂತೆ ಸಾಮ್ರಾಜ್ಯಗಳು ದಕ್ಷತೆ ವಹಿಸುತ್ತಲಿವೆ.

ಹೀಗೆ ಬಂಡವಲವಾದವು ಒಂದು ಮಟ್ಟಕ್ಕೆ ಮುಟ್ಟಿದಾಗ ಹೊಸ ಹೊಸ ರಾಷ್ಟ್ರಗಳು ತಮಗೂ ವ್ಯಾಪಾರದ ಅನುಕೂಲತೆಗಳು ಬೇಕು ಬೇಕು ಎಂದು ಬಯಸಹತ್ತಿವೆ. ಸಾಮ್ರಾಜ್ಯವು ಬೆಳೆದುದು ಪೇಟೆಯನ್ನು ಕೈಯಲ್ಲಿಟ್ಟುಕೊಳ್ಳುವ ಉದ್ದೇಶದಿಂದ. ಅಂದಮೇಲೆ ಬೇರೆ ಬೇರೆ ರಾಷ್ಟ್ರಗಳಿಗೆ, ವ್ಯಾಪಾರಕ್ಕೆ ಕೊಡುವುದೆಂದರೆ, ತಮ್ಮ ಕಾಲಮೇಲೆ ತಾವೇ ಕಲ್ಲು ಹಾಕಿಕೊಂಡಂತೆಯೇ. ಆದುದರಿಂದ ಬಂದದ್ದು ಬರಲಿ, ಸಾಮ್ರಾಜ್ಯವನ್ನು ರಕ್ಷಿಸಬೇಕು ಎಂದು ರಾಷ್ಟ್ರರಾಷ್ಟ್ರಗಳಲ್ಲಿ ಮತ್ಸರವುಂಟಾಗಿ, ಇಂದು ಜಗತ್ತಿನಲ್ಲಿ ಯುದ್ಧವು ಅನಿವಾರ್ಯವಾಗಿದೆ.

**ಯುದ್ಧ, ಅಶಾಂತಿ:—** ಸಾಮ್ರಾಜ್ಯಗಳನ್ನು ಕಾಯ್ದುಕೊಳ್ಳಲು ಎಲ್ಲ ರಾಷ್ಟ್ರಗಳೂ ಯುದ್ಧೋಪಕರಣಗಳನ್ನು ಬೆಳೆಸಹತ್ತಿವೆ. ವಿಮಾನ

ಗಳು, ಮೋಟಾರಗಸ್ಸುಗಳು, ಬಾಂಬುಗಳು, ಸಬ್ಮರೀನಗಳು, ಟ್ಯಾಂಕು ಗಳು, ವಿಷವಾಯುಗಳ ಕಾರಖಾನೆಗಳು ಮಿತಿಮೀರಿ ಬೆಳೆಯತೊಡಗಿವೆ. ಇಂಥ ಮಾನವ-ಧ್ವಂಸಕ ಜ್ವಾಲಾಗ್ರಾಹಿ ಕಾರಖಾನೆಗಳಿಂದ ಯಾವ ಪರಿಣಾಮಗಳಾಗಬಹುದೆಂಬುದು ಮೇಲೆಯೇ ಕಾಣುತ್ತಲಿದೆ. ಹಿಂದಿನ ಮಹಾಯುದ್ಧವು ಇದರದೇ ಪರಿಣಾಮವಲ್ಲವೇ? ಮುಂದಿನ ಮಹಾ ಯುದ್ಧವು ಬಾಯಿದೆರೆದು ಜಗತ್ತಿನ ಎದುರು ನಿಂತಿದೆ. ರಾಷ್ಟ್ರರಾಷ್ಟ್ರ ಗಳು, ಮಾನವ ಜನಾಂಗವು ಆ ಭೀಕರವಾದ ಅಗ್ನಿಪ್ರಳಯದ ಕಡೆಗೆ ಗಾಬರಿಗೊಂಡು ನೋಡುತ್ತಲಿವೆ. **ಇದೇ ಬಂಡವಲವಾದದ ನಗ್ನರೂಪ.**

**ಸಾಮಾಜಿಕ ಕ್ರಾಂತಿ ಹಾಗು ನೂತನ ವರ್ಗಗಳ ನಿರ್ಮಾಣ:—** ಧನದಿಂದ ಧನ ಹುಟ್ಟಿಸುವ ಕಲೆಯು ಹುಟ್ಟಿದೊಡನೆಯೇ ಬಂಡ ವಲಗಾರರು ತಮ್ಮ ಧನವನ್ನು ಕೂಡಿಸಿ ಬಂಡವಲ ಸಂಘಗಳನ್ನು (Ltd. Companies) ಮಾಡಿದರು. ತಜ್ಞರಾದ ಜನರ ಮಂಡಲಗಳು (Board of Directors) ಏರ್ಪಟ್ಟವು. ಇವರೇ ಪ್ರತ್ಯಕ್ಷ ಧನೋ-ತ್ಪಾದನೆಯನ್ನು ಕೈಕೊಂಡದ್ದರಿಂದ ನಮ್ಮಲ್ಲಿಯ ಜಹಗೀರದಾರರಂಥ ದುಡಿಯದ ಶ್ರೀಮಂತರ ವರ್ಗ (Idle Aristocracy) ಹೊಂದು ದೇಶಗಳಲ್ಲಿ ನಿರ್ಮಾಣವಾಯಿತು.

ತಮ್ಮ ಬುದ್ಧಿಬಲದಿಂದ ಯಾವ ಸರಕುಗಳನ್ನು ಎಷ್ಟೆಷ್ಟು ಹುಟ್ಟಿಸಿ ದರೆ ಹೆಚ್ಚು ಲಾಭವೆಂಬುದನ್ನು ಕಂಡುಹಿಡಿದು, ಧನೋತ್ಪತ್ತಿಗೆ ಚಾಲನೆ ಕೊಡುವ ಬೇರೊಂದು ವರ್ಗವೂ ಹುಟ್ಟಿತು. ಇವರೂ ಧನೋತ್ಪಾದ ನೆಯ ಕಲ್ಪಕರಾಗಿ ದೊಡ್ಡದೊಡ್ಡ ಸಂಬಳ ಪಡೆದು, ಶ್ರೀಮಂತ ವರ್ಗ ಗಳ ಮರಿಗಳೇ ಆದರು.

ರಾಷ್ಟ್ರದಲ್ಲಿಯ ಉದ್ಯೋಗಗಳೆಲ್ಲವು ಮುರಿದದ್ದರಿಂದ ಕೂಲಿ ಯಿಂದ ಜೀವಿಸುವ ಮತ್ತು ಈ ಶ್ರೀಮಂತರ ಸೇವೆ ಮಾಡುವ ಜೀತ ದಾಳುಗಳ ಇನ್ನೊಂದು ವರ್ಗ. ಹೀಗೆ ಶ್ರೀಮಂತ, ಕೂಲಿಕಾರರು ಎಂಬ ಎರಡೇ ವರ್ಗಗಳು ಉಳಿಯಹತ್ತಿದವು. ನಡುವಿನ ಸಾಮಾನ್ಯ ವರ್ಗ ಗಳು ಹಾಳಾದವು. ಬಂಡವಲವಾದವು ಬೆಳೆದ ಹಾಗೆಲ್ಲ ಈ ವರ್ಣಭೇದವು

ಸ್ಪಷ್ಟವಾಗಿ ರೂಪುಗೊಂಡಿತು. ತಾವು ಶ್ರೇಷ್ಠರು, ಅವರು ಕನಿಷ್ಠರು ಎಂಬ ಭಾವನೆಗಳು ಬೇರೂರಹತ್ತಿದವು. ಕನಿಷ್ಠ ವರ್ಗದವರು ವರಿಷ್ಠ ವರ್ಗದವರ ಸೇವೆಗಾಗಿಯೇ ದೇವರು ಹುಟ್ಟಿಸಿದ್ದಾನೆ ಎಂಬ ಭಾವನೆಗಳನ್ನು ಜನರ ತಲೆಯಲ್ಲಿ ತುಂಬಲು ಆರಂಭವಾಯಿತು. ದುಡ್ಡಿದ್ದವನಿಗೇ ಮರ್ಯಾದೆ, ಅವನೇ ದೊಡ್ಡವನು ಎಂಬ ಭಾವನೆಯು ನೆಲೆಯೂರಹತ್ತಿದೊಡನೆಯೇ ತಾವು ಶ್ರೀಮಂತಿಕೆಯಿಂದ ಬಾಳುವಂತೆ ತಮ್ಮ ಮಕ್ಕಳೂ ಬಾಳಬೇಕೆಂದು, ಈ ಬಂಡವಲಗಾರರ ವರ್ಗವು ಕರುಣೆಯಿಲ್ಲದೆ ಎರಡನೇ ವರ್ಗದವರ ಶ್ರಮದಿಂದ ಹುಟ್ಟುವ ಧನದಲ್ಲಿ ಅವರ ಜೀವನಾಧಾರಕ್ಕೆ ಸಾಲುವಷ್ಟು ಮಾತ್ರ ಕೊಟ್ಟು ಉಳಿದದ್ದನ್ನೆಲ್ಲ ಲಾಭವೆಂಬ ಹೆಸರಿನಿಂದ ಅವರ ರಕ್ತವನ್ನು ಹೀರಹತ್ತಿದವು. ಇದರಿಂದ ಒಮ್ಮೆ ಬಡವನಾದವನು ಕಡೆತನಕ ಬಡವನೇ! ಅವನು ವಂಶಪರಂಪರೆಯಾಗಿ ಬಡವ! ಶ್ರೀಮಂತನಿದ್ದವನು ವಂಶಪರಂಪರೆಯಾಗಿ ಶ್ರೀಮಂತ. ಧನೋತ್ಪಾದಕ ಸಾಧನಗಳೆಲ್ಲವೂ ಶ್ರೀಮಂತರ ವಶವಾದ್ದರಿಂದ ಬಡವರ ಆಧಾರವೇ ತಪ್ಪಿ ಹೋಯಿತು.

ಗುಲಾಮಗಿರಿಯನ್ನು ನಿರ್ಮೂಲ ಮಾಡಿದ್ದೇವೆ. ಗುಲಾಮರ ವ್ಯಾಪಾರವು ಅಪರಾಧವೆಂದು ಸಾರಿದ್ದೇವೆನ್ನುವ ಈ ಸರಕಾರಗಳೇ ತಮ್ಮ ರಾಷ್ಟ್ರಗಳಲ್ಲಿ ಏನು ನಡೆಯಿಸಿವೆ? ಕೂಲಿಕಾರರ ಗತಿ ಏನಾಗಿದೆ ಈ ರಾಷ್ಟ್ರಗಳಲ್ಲಿ? ಸ್ವತಂತ್ರ ಜೀವನದ ಸಾಧನಗಳನ್ನೇ ಕಳೆದುಕೊಂಡು, ರಾಷ್ಟ್ರದ ಬಹುಸಂಖ್ಯಾಕರನ್ನು ಕೂಲಿಗಳನ್ನಾಗಿ ಮಾಡುವದು ಗುಲಾಮಗಿರಿಯ ಮತ್ತೊಂದು ರೂಪವಲ್ಲವೆ? ಗುಲಾಮರಿಗೆ ಇರುವಷ್ಟು ಸುಖ ಸ್ವಾತಂತ್ರ್ಯಗಳು ಕೂಲಿಕಾರರಿಗೆ ಇವೆಯೇ? ಪಶುಗಳಂತೆ ಕೂಲಿಕಾರರನ್ನು ಗಿಜರಿಂದಗಿಲ ತಾಸುಗಳಂತೆ ದುಡಿಸುವದರ ಅರ್ಥವೇನು? ಹೀಗೆ ದುಡಿಸಿಕೊಂಡು ಅವರಿಗೆ ಕೊಡುವುದಾದರೂ ಎಷ್ಟು? ದುಡಿಯುವ ದಿವಸಗಳಲ್ಲಿ ಹೊಟ್ಟೆಗೇ ತಿಟಿವಿಟಿಯಾಗುವಷ್ಟು ಜೀನೆ-ಬೇಸರಿಕೆಗಳಿಂದ ಅವರು ದುಡಿಯದಂತಾದರೆ, ಸರಕಾರದ ಪೋಲಿಸ ಕಡೆಗೆ ಅವರು ಧಾವಿಸಬೇಕು. ಗುಲಾಮರಿಗೆ ತಮ್ಮ ಹೊಟ್ಟೆಯ ಚಿಂತೆಯಾದರೂ ಇದ್ದಿದ್ದಿಲ್ಲ. ಸುಧಾರಿಸಿದ ರಾಷ್ಟ್ರದ ಈ ಗುಲಾಮರಿಗೆ ಗುಲಾಮರಂತೆ ದುಡಿತ ತಪ್ಪ

ದಿಪ್ಪದೂ ಹೊಟ್ಟೆಯ ಚಿಂತೆ ಮಾತ್ರ ತಪ್ಪಿಲ್ಲ. ಇದು ದುಡಿಯುವ ಕೂಲಿಕಾರರ ಸ್ಥಿತಿ. ಆದರೆ ಇದಕ್ಕೂ ಘೋರವಾದ ಸ್ಥಿತಿಯೆಂದರೆ ಕೂಲಿ ಸಿಗದ ನಿರುದ್ಯೋಗಿಗಳದು.

ಒಬ್ಬನ ಹೊಟ್ಟೆಗೆ ಸಾಲುವಷ್ಟೇ ಕೂಲಿ ಸಿಕ್ಕುತ್ತಿದ್ದುದರಿಂದ ಹೆಣ್ಣುಮಕ್ಕಳೂ ಹೊಟ್ಟೆಗಾಗಿ ಫ್ಯಾಕ್ಟರಿಗಳಲ್ಲಿ ದುಡಿಯಲೇ ಬೇಕಾಯಿತು. ಹೆಣ್ಣುಮಕ್ಕಳು ಗಂಡಸಿಗಿಂತ ಕಡಿಮೆ ದುಡಿಯದಿದ್ದರೂ ಕೂಲಿಯು ಮಾತ್ರ ಅವರಿಗಿಂತಲೂ ಕಡಿಮೆ. ಕಡಿಮೆ ಕೂಲಿಯಿಂದ ದುಡಿಸಿಕೊಳ್ಳುವ ಪ್ರವೃತ್ತಿಯು ಬೆಳೆದಂತೆ ೫ ವರ್ಷದ ಎಳೆ ಮಕ್ಕಳನ್ನು ಕೂಡ ಕೂಲಿಗೆ ಹಚ್ಚ ಹತ್ತಿದರು.

ಹೀಗೆ ಬಡತನವನ್ನು ಬಲಿಯಗೊಟ್ಟು ಅದರ ಲಾಭವನ್ನು ತೆಗೆದುಕೊಳ್ಳುವ ರಾಕ್ಷಸೀ ಧೋರಣದಿಂದ ಬಡವರ ಬಡತನವು ಅತಿರೇಕಕ್ಕೆ ಮುಟ್ಟಿದೆ.

ಒಂದೆಡೆಗೆ ಶ್ರೀಮಂತರು ಅರಮನೆಯಂಥ ಉಪ್ಪರಿಗೆಗಳಲ್ಲಿ ನಲಿಯುತ್ತಿದ್ದಾರೆ, ಇನ್ನೊಂದೆಡೆಗೆ ಬಡವರು ವಾಸಿಸಲು ತಿಪ್ಪೆಗಳು ಕೂಡ ದೊರೆಯದೆ ನರಳುತ್ತಿದ್ದಾರೆ. ಒಂದೆಡೆಗೆ ಅಜೀರ್ಣವಾಗಿದೆ ಏನು ಮಾಡೋಣವೆಂದು ನರಳುತ್ತಿದ್ದರೆ, ಇನ್ನೊಂದೆಡೆಗೆ ಉಪವಾಸ ಸಾಯುತ್ತಲಿದ್ದೇವೆ ಅನ್ನ ಅನ್ನವೆಂದು ಚೀರುತ್ತಲಿದ್ದಾರೆ. ಕೆಲವರಿಗೆ ತಮ್ಮ ಧನವನ್ನೇನು ಮಾಡಬೇಕು ಎಲ್ಲಿ (Invest) ಉಪಯೋಗಿಸಬೇಕೆಂಬ ಚಿಂತೆ ಇದ್ದರೆ ಬಹುಸಂಖ್ಯಾಕರಿಗೆ ನಾಳಿನ ಹೊಟ್ಟೆಗಾಗಿ ಏನು ಮಾಡಬೇಕೆಂಬ ಚಿಂತೆ. ಒಂದೆಡೆಗೆ ತರುಣರು ತಮ್ಮ ಪ್ರೇಯಸಿಯರೊಡನೆ ವಿಹಾರಕ್ಕೆ ಹೋಗುವದನ್ನು ಕಂಡರೆ, ಮತ್ತೊಂದೆಡೆಗೆ ಗಂಡ ಹೆಂಡಿರು ಅಳುವ ಎಳೆ ಮಕ್ಕಳನ್ನು ಕಟ್ಟಿಕೊಂಡು ಹೊಟ್ಟೆಗಾಗಿ ಕಾರಖಾನೆಗಳ ಕಡೆಗೆ ಓಡುತ್ತಿರುವದು ಕಾಣುವದು. ನೃತ್ಯ, ನಾಟಕ, ಚಿತ್ರಪಟ ಮೊದಲಾದ ಮನರಂಜನೆಗಳಲ್ಲಿ ಕಾಲಕಳೆಯುವ ಶ್ರೀಮಂತರ ತಂಡ ಒಂದು ಕಡೆಗೆ, ಬಿಡುವಿಲ್ಲದೆ ದುಡಿದು ದುಡಿದು, ಬೇಸರ ಕಳೆಯಲು ಮದ್ಯ ಸೇವಿಸಿ ಉನ್ಮತ್ತರಾಗಿ, ಕಲಹಮಾಡುತ್ತಿರುವವರು ಇನ್ನೊಂದು ಕಡೆಗೆ.

ಉಪವಾಸದ ದಿನಗಳನ್ನು ಕಳೆಯಲು ಉಪಾಯಗಾಣದೆ, ದೇಹ ವಿಕ್ರಯಕ್ಕೆ ಸಿದ್ಧರಾದ ವಾರಾಂಗನೆಯರೊಂದು ಕಡೆ, ಕಲಾಪ್ರೇಮಿಗಳು ತಲೆದೂಗುವಂತೆ ಶ್ರೀಮಂತಕಲಾನಿಷ್ಠರಾದ ಸುಂದರಿಯರಿನ್ನೊಂದು ಕಡೆ. ಮುಟ್ಟಿದರೆ ಮಾಸುವದೆಂಬ ತುಂಬಿದ ಪ್ರೌಯುವರೊಂದು ಕಡೆ, ನಾನಾ ರೋಗಗಳ ಹೊಡೆತಕ್ಕೆ ಸಿಕ್ಕು ಹಣ್ಣಾಗಿ, ಹೊಟ್ಟೆಗೆ ಅನ್ನವಿಲ್ಲದೆ, ಅಸ್ಥಿ ಚರ್ಮಗಳ ಜೀವಂತ ಹೆಣಗಳು ಇನ್ನೊಂದು ಕಡೆ. ಹೀಗೆ ಬಂಡವಲವಾದವು ಮಾನವ ವರ್ಗದಲ್ಲಿಯೆ ಹಾಹಾಕಾರವನ್ನೆಬ್ಬಿಸಿದೆ. ಕೆಲವರಿಗೆ ಸುಖ, ಆನಂದ, ಸ್ವಾತಂತ್ರ್ಯಗಳನ್ನು ಒದಗಿಸಿಕೊಟ್ಟು, ಬಹುಸಂಖ್ಯಾಕರನ್ನು ದುಃಖ,ದಾರಿದ್ರ್ಯ, ಪಾರತಂತ್ರ್ಯಗಳಲ್ಲಿ ಮುಳುಗಿಸಿದೆ. ದೇಶದಲ್ಲಿ ಸಂಪತ್ತು ಬೆಳೆದಿದೆ. ಬೊಕ್ಕಸಗಳು ತುಂಬಿ ಹೊರ ಚೆಲ್ಲುತ್ತಲಿವೆ. ಆದರೆ ಬಡವರ ಒಡಲು ಬರಿದಾಗಿ, ಕ್ರಾಂತಿಯ ಕೂಗನ್ನೆಬ್ಬಿಸಿದೆ. ಹೀಗೆ ವಿಚಿತ್ರ ಆಟವನ್ನು ಹೂಡಿದೆ, ಈ ಬಂಡವಲವಾದ.

---

# ಬಂಡವಳವಾದದ ದೋಷವೆಲ್ಲಿದೆ?

೪



ವೈಜ್ಞಾನಿಕ ಶೋಧಗಳಿಂದ ಹುಟ್ಟುವಳಿಯು ವಿಪುಲವಾಗಿ ಬೆಳೆದರೂ ಯಂತ್ರಗಳಿಂದ ಮನುಷ್ಯನ ಶ್ರಮ ಹಾಗೂ ವೇಳೆ ಉಳಿಸಲು ಸಾಧ್ಯವಿದ್ದರೂ, ಬಹುಜನ ಸಮಾಜವು ದುಃಖದಿಂದ ಬಳಲುವದು ಆಶ್ಚರ್ಯವಲ್ಲವೇ? ಇದರ ವಿರುದ್ಧವಾಗಿ ಮಾನವನು ಜೀವನಕ್ಕಾಗಿ ಅತ್ಯಂತ ಶ್ರಮಬಡುತ್ತಲಿದ್ದಾನೆ. ಶ್ರಮಜೀವಿಗಳು ವಿಶ್ರಾಂತಿಗಾಗಿ ಬಾಯಿಬಿಡುತ್ತಲಿದ್ದಾರೆ. ಎಲ್ಲಿ ನೋಡಿದಲ್ಲಿಯೂ ದುಃಖ, ದಾರಿದ್ರ್ಯ, ಕೆಲಸಗೇಡಿತನ, ವರ್ಗಕಲಹ, ಅಶಾಂತಿಗಳು ಘೋರವಾದ ತಾಂಡವ ನೃತ್ಯವನ್ನೇ ನಡೆಯಿಸಿವೆ. ಇದರ ಕಾರಣವೇನಿರಬಹುದು? ಯಂತ್ರಗಳು ಈ ಅನರ್ಥಕ್ಕೆ ಕಾರಣವೇ? ಬಂಡವಲವು ಕಾರಣವೋ? ಸಹಜವಾಗಿಯೂ ವಿಚಾರ ಮಾಡಿದರೆ ಎರಡೂ ಕಾರಣವಲ್ಲ. ತಾತ್ತ್ವಿಕ ದೃಷ್ಟಿಯಿಂದ ನೋಡಿದರೆ, ಇವು ಜಡಗಳು. ತಮ್ಮಷ್ಟಕ್ಕೆ ತಾವು ಏನೂ ಮಾಡಲಾರವು. ಆದರೆ ಮಾನವನು ಅವುಗಳನ್ನು ಉಪಯೋಗಿಸುವದರ ಬುದ್ಧಿಯಲ್ಲಿಯೇ ಅದರ ದೋಷವಿದೆ. ಯಾಕೆಂದರೆ, ಮಾನವನು ತನ್ನ ಜೀವನದ ಸೌಕರ್ಯಕ್ಕಾಗಿಯೇ ಯಂತ್ರಗಳನ್ನು ನಿರ್ಮಿಸಿಲ್ಲವೆ!

**ಯಂತ್ರಗಳು ಕಾರಣವೇ?:**— ಕೆಲವು ಜನರು ಯಂತ್ರಗಳು ಉದಯವಾದೊಡನೆಯೇ ಇಷ್ಟೆಲ್ಲ ಅನರ್ಥಪರಂಪರೆಗಳು ಸಮಾಜದಲ್ಲಿ ತಲೆಯೆತ್ತಿವೆ. ಯಂತ್ರವೇ ಕಾರಣವೆನ್ನುತ್ತಾರೆ ಇದು ಸತ್ಯವೆ? ಹತ್ತು ಜನರು ಮಾಡುವಷ್ಟು ಕೆಲಸವನ್ನು ಯಂತ್ರವು ಒಬ್ಬನಿಂದಲೇ ಮಾಡು

ತ್ತದೆ. ಉಳಿದ ಒಂಭತ್ತು ಜನರು ನಿರುದ್ಯೋಗಿಗಳಾಗುತ್ತಾರೆ ಎಂದು ಯಂತ್ರವಿರೋಧಿಗಳ ಮತ. ನಿಜ. ಒಬ್ಬನೇ ಆ ಯಂತ್ರವನ್ನು ೧೦ ತಾಸು ನಡೆಯಿಸಿ, ಮಿತಿಮೀರಿ ಉತ್ಪನ್ನ ಬೆಳೆಯಿಸಬೇಕೆಂಬ ಬುದ್ಧಿಯಿಂದ ನಾಗಿದರೆ, ೧೦ ಜನರು ನಿರುದ್ಯೋಗಿಗಳಾಗುವದು ಖಂಡಿತ. ನಿರುದ್ಯೋಗವು ಬೆಳೆಯಬಾರದು, ಎಲ್ಲರಿಗೂ ಹೊಟ್ಟೆಗೆ ಸಿಗಬೇಕು ಎಂಬ ಬುದ್ಧಿಯಿಂದ ೧೦ ಜನರನ್ನೂ ಒಂದೊಂದು ತಾಸು ದುಡಿಸಿದರೆ? ಇಲ್ಲವೆ ಅನುಕೂಲತೆಯಂತೆ ದುಡಿಸಿದರೆ, ಎಲ್ಲರಿಗೂ ಉದ್ಯೋಗವು ದೊರೆಯುವದಿಲ್ಲವೇ ? ಎಲ್ಲರಿಗೂ ಶ್ರಮ ಹಾಗು ವೇಳೆಗಳು ಉಳಿದು ಅವರ ಬೌದ್ಧಿಕ ವಿಕಾಸಕ್ಕೆ, ಆಧ್ಯಾತ್ಮ ಸಾಧನೆಗೆ ಅನುಕೂಲವಾಗುವದಿಲ್ಲವೆ? ಯಂತ್ರವೇನು ಒಬ್ಬನನ್ನೇ ದುಡಿಯಲು ಹಚ್ಚಿರಿ ಎಂದು ಹಟ ಹಿಡಿಯುವದೇ ? ಇಲ್ಲ, ಸರ್ವಥಾ ಇಲ್ಲ. ಆದರೆ ಯಂತ್ರದ ಒಡೆಯನು ಮಾತ್ರ ನಿರ್ದಯನಾಗಿ ಸ್ವಾರ್ಥದ ದೃಷ್ಟಿಯಿಂದ ಒಬ್ಬನೇ ೧೦ ತಾಸು ಏಕೆ ೧೨ ತಾಸು ದುಡಿಯಲು ಶಕ್ಯವಿದ್ದರೆ, ದುಡಿಸೋಣವೆಂಬ ಬುದ್ಧಿಯವನಾಗಿದ್ದಾನೆ. ಅದಕ್ಕಾಗಿ ಆಗ್ರಹಪಡುತ್ತಲಿದ್ದಾನೆ. ಇಷ್ಟೇ ಅಲ್ಲ ಆಳಿನ ದುಡಿತದ ಫಲದಲ್ಲಿ ಅವನ ಜೀವಿತಕ್ಕೆ ಕೂಡ ಪೂರಾ ಕೊಡದೆ, ಅದನ್ನೆಲ್ಲ ಕಳೆಯುವದರಲ್ಲಿಯೇ ಇಂದು ಬಂಡವಲಗಾರನು ಮಗ್ನನಾಗಿದ್ದಾನೆ. ಅಂದಮೇಲೆ, ಕೂಲಿಯವನಿಗೆ ವಿರಾಮವೆಲ್ಲಿ? ಉಳಿದವರಿಗೆ ಕೆಲಸ ಸಿಗುವ ಬಗೆ ಹೇಗೆ? ಇದಕ್ಕೆ ಯಂತ್ರವೇನು ಮಾಡಬೇಕು? ನಿಜವಾಗಿಯೂ ವಿಚಾರ ಮಾಡಿದರೆ, ಕೂಲಿಗಾರನ ಶ್ರಮದಿಂದ ಉತ್ಪನ್ನವಾದ ಧನದಲ್ಲಿ ಕೂಲಿಕಾರನ ಭಾಗವಿಲ್ಲವೆ? ಆದರೆ ಅದನ್ನೆಲ್ಲ ಬಂಡವಲುದಾರರು ಇಂದು, ಅವನಿಗೆ ಸಲ್ಲಿಸುತ್ತಿರುವರೆ? ಒಬ್ಬನ ಹಕ್ಕಿನ ವಸ್ತುವನ್ನು ಇನ್ನೊಬ್ಬನು ತೆಗೆದುಕೊಳ್ಳುವದು ಕಳ್ಳತನವಲ್ಲದೆ ಮತ್ತೇನು? ಆದರೆ, ಇಂದು ಅದೆಲ್ಲವೂ 'ವ್ಯವಹಾರ' ವೆಂಬ ಉದಾತ್ತವಾದ ಹೆಸರಿನಿಂದ ಸಮಾಜದಲ್ಲಿ ನಡೆದು ಬಿಟ್ಟಿದೆ; ಇರಲಿ.

ಕೆಲಸವಿಲ್ಲದ ಜನರು ಹೆಚ್ಚಾದಂತೆ ಅವರಲ್ಲಿ ಕ್ರಯ (ಕೊಳ್ಳುವ) ಶಕ್ತಿಯು ಸ್ವಾಭಾವಿಕವಾಗಿಯೇ ಕಡಿಮೆಯಾಗುತ್ತದೆ. ಇದರಿಂದ

ಯಂತ್ರದ ಸಹಾಯದಿಂದ ಹುಟ್ಟಿಸಿದ ಸರಕು ವ್ಯಾಪಾರವಾಗದೇ ಉಳಿಯುಹತ್ತುತ್ತದೆ. ಆದರೆ ಇದರ ಬದಲು ಎಲ್ಲರನ್ನೂ ಕೆಲಸಕ್ಕೆ ಹಚ್ಚಿ ಅವರಲ್ಲಿ ಕ್ರಯಶಕ್ತಿಯು ಬೆಳೆಯುವಂತೆ ಮಾಡಿದರೆ? ಕ್ರಯಶಕ್ತಿಯು ಬೆಳೆದಂತೆ ಅವರ ಬೇಡಿಕೆಗಳನ್ನು ಪೂರೈಸಲು, ಹೊಸ ಹೊಸ ಕಾರಖಾನೆಗಳು ಹುಟ್ಟುವವು. ಅವರ ಜೀವಿತಕ್ಕೆ ಬೇಕಾಗುವ ಒಡವೆಗಳ ಪೂರೈಕೆಯಾಗಿ ಸಮಾಜವು ಪುಷ್ಟವಾಗುವದು. ಇದರಿಂದ ಮಾನವನ ಜೀವನವು (Standard of Living) ಮೇಲ್ತರಗತಿಗೆ ಮುಟ್ಟಲು ಅನುಕೂಲವಾಗುವದು.

ಈ ದೃಷ್ಟಿಯಿಂದ ಮಧ್ಯಮತರಗತಿಯ ಜೀವನಕ್ಕೆ ಇಡೀ ಮಾನವ ಸಮಾಜವು ಮುಟ್ಟಬೇಕಾದರೆ, ಎಷ್ಟು ಕಾರಖಾನೆಗಳು ಹುಟ್ಟಬೇಕು, ಅದೆಷ್ಟು ವರ್ಷ ಕಾರ್ಯ ಮಾಡಬೇಕು? ನಿರುದ್ಯೋಗತನವು ತಲೆಯೆತ್ತುವದು ಯಾವಾಗ? ಮಾನವ ಜನಾಂಗದ ಬೇಡಿಕೆಗಳ ಚರಮಸೀಮೆಯನ್ನು ಮುಟ್ಟಿದಾಗ. ಜನರ ಕ್ರಯಶಕ್ತಿಯೂ ಇದೇ ಪ್ರಮಾಣದಲ್ಲಿ ಬೆಳೆದರೆ, ಈ ಪ್ರಶ್ನೆಯೇ ತಲೆಯೆತ್ತುವದಿಲ್ಲ. ರಶಿಯಾದಲ್ಲಿ ನೋಡಿದರೆ, ಯಾವ ದೇಶದವರೂ ಉಪಯೋಗಿಸದಷ್ಟು ಯಂತ್ರಗಳನ್ನು ಅವರು ಉಪಯೋಗಿಸತೊಡಗಿದ್ದಾರೆ. ಒಕ್ಕಲತನವು ಕೂಡ ಯಂತ್ರಗಳ ಸಹಾಯದಿಂದಲೇ ನಡೆಸಲ್ಪಡುತ್ತದೆ. ಆದರೆ, ಅಲ್ಲಿ ಜಗತ್ತಿನಲ್ಲಿಯೇ ಧನಾಢ್ಯ ರಾಷ್ಟ್ರಗಳಾದ ಅಮೇರಿಕೆ, ಇಂಗ್ಲಂಡಗಳಂತೆ ನಿರುದ್ಯೋಗದ ಸಮಸ್ಯೆಯೇ ಇಲ್ಲ. ಯಾಕಂದರೆ, **ಅಲ್ಲಿಯ ಉತ್ಪತ್ತಿಯು ಒಬ್ಬರಿಗಾಗಿ ಅಲ್ಲ, ರಾಷ್ಟ್ರಕ್ಕಾಗಿ, ಎಲ್ಲರಿಗಾಗಿ; ಇಡೀ ರಶಿಯನ್ನರಿಗಾಗಿ.**

ಅಂದರೆ ಸ್ವತಃ ಯಂತ್ರವು ನಿರುದ್ಯೋಗತನವನ್ನುಂಟುಮಾಡುವದಿಲ್ಲ. ಅದನ್ನುಂಟುಮಾಡುವದು ಮಾನವನ ಬುದ್ಧಿಯು. **೧೦ ಜನರ ಲಾಭವನ್ನು ಒಬ್ಬನೇ ತಿನ್ನಬೇಕೆಂಬ ಮಾನವನ ರಾಕ್ಷಸೀ ಮಹತ್ವಾಕಾಂಕ್ಷೆಯು.**

ಮಾನವರಿಗೆ, ವಿಶ್ರಾಂತಿಯನ್ನು ಒದಗಿಸಿಕೊಟ್ಟು, ಸುಖಿಗಳನ್ನಾಗಿ ಮಾಡುವ ಶಕ್ತಿಯು ಯಂತ್ರಗಳಲ್ಲಿದೆ. ಮೂಲತಃ ಅವು ಮಾನವನ

ಸುಖಕ್ಕಾಗಿಯೇ ಹುಟ್ಟಿವೆ. ಆದರೆ ಬಂಡವಲಗಾರರು ಧನೋತ್ಪಾದನದ ಸಾಧನಗಳಾದ ಯಂತ್ರಗಳನ್ನು ವಶಪಡಿಸಿಕೊಂಡು, ಸ್ವಾರ್ಥಕ್ಕಾಗಿ-ಕೇವಲ ತಮ್ಮ ಲಾಭಕ್ಕಾಗಿ-ಉಪಯೋಗಿಸುತ್ತಿರುವದರಿಂದ ಜಗತ್ತಿನಲ್ಲಿ ನಿರುದ್ಯೋಗತನವು ತಲೆಯೆತ್ತಿದೆ. ಜಗತ್ತಿನಲ್ಲಿ ವಿಪುಲವಾದ ಸಂಪತ್ತಿದ್ದರೂ ಬಡತನವು ಭೀಕರವಾಗಿ, ಜನರು ಅನ್ನನ್ನಗತಿಕರಾಗಿದ್ದಾರೆ ಇದಕ್ಕೆ ಯಂತ್ರಗಳೇನು ಮಾಡಬೇಕು! ಈ ಆರ್ಥಿಕ ಅಸಮಾನತೆಗೆ, ಅನರ್ಥಗಳಿಗೆ, ಕೇವಲ ಯಂತ್ರಗಳು ಕಾರಣವಿರದೆ, **ವ್ಯಕ್ತಿ ಒಡೆತನದ ಭಾವನೆಯೇ ಮುಖ್ಯ ಕಾರಣವು. ಇದೇ ಬಂಡವಲವಾದದ ಮುಖ್ಯ ದೋಷವು. ಇದೇ ಅದರ ಆ ಗುಟ್ಟು.**

**ವ್ಯಕ್ತಿ ಒಡೆತನ ಅಥವಾ ಮಾಲ್ಕಿಹಕ್ಕು:—** ಮೇಲೆ ವಿವರಿಸಿದಂತೆ ಕೇವಲ ಯಂತ್ರಗಳು ಹೇಗೆ ಜಡವೋ ಹಾಗೆಯೇ ಬಂಡವಲವೂ ಮೂಲತಃ ಜಡವೇ! ಆದರೆ ಅದನ್ನು ಉಪಯೋಗಿಸುವ ಬುದ್ಧಿಯಲ್ಲಿಯೇ ನಿಜವಾಗಿ ದೋಷವಿರುವದು. **ಇದು ನನ್ನದು ಇದನ್ನು ಉಪಯೋಗಿಸುವ ಅಧಿಕಾರವು ನನಗೇ ಇದೆ, ಇದರ ಒಡೆಯನು ನಾನು ಎಂಬುದೇ ಇದರ ಬೀಜವು.**

ನಮ್ಮ ಜೀವನಕ್ಕೆ ಸಾಕಾಗಿ, ಹೆಚ್ಚಾಗಿ ಉಳಿದ ಹಣವೇ ಬಂಡವಲವು. (Surplus money is Called Capital). ನಮ್ಮ ಧನವೆಲ್ಲ ಭೂಮಿತಾಯಿಯ ಉಡಿಯಲ್ಲಿ. ಈ ಬಂಡವಲಿನ ಉಗಮವು ಭೂಮಿಯಿಂದ ಬಂದ ಬೆಳೆಯಲ್ಲಿಯೇ. ಭೂಮಿಯಲ್ಲಿದುಡಿದು ಬೆಳೆದು ಬಂದುದರಲ್ಲಿ ಜೀವನಕ್ಕೆ ಉಪಯೋಗಿಸಿಕೊಂಡು, ಉಳಿದದ್ದನ್ನೆಲ್ಲ ಸಂಗ್ರಹಿಸುವೆವು. ಅದು ಯಾರದು? ಭೂಮಿಯನ್ನು ಯಾವನು ತನ್ನ ಅಧೀನದಲ್ಲಿಟ್ಟುಕೊಂಡಿರುವನೋ ಅವನದು. ಅವನ ಒಡೆತನದ್ದು. ಎಂದು ಈಗಿನ ಸಮಾಜದ ನಿಯಮ. ಕಟ್ಟಳೆ.

ಆದರೆ, ನಾವು ಸ್ವಲ್ಪು ಸಮಾಜದಿಂದ ದೂರ ಸರಿದು ನಿಂತು ವಿಚಾರ ಮಾಡಿದರೆ, ನಮಗೇನು ಕಂಡು ಬರುವದು? ಇಡೀ ಸಮಾಜವೇ ಕಾಡು ಕಡಿದು, ಭೂಮಿಯನ್ನು ಸಿದ್ಧಪಡಿಸಿ, ಸಮಾಜಕ್ಕಾಗಿಯೇ

ಸಾಗುಮಾಡಿದ್ದೂ ಸಾಗುಮಾಡಲು ಅನುಕೂಲವಾಗಬೇಕೆಂದೇ ಭೂಮಿಗಳನ್ನು ತುಂಡು ತುಂಡು ಮಾಡಿಕೊಂಡದ್ದೂ ಕಂಡು ಬರುವದಿಲ್ಲವೆ? ಮಾನವ ಜಾತಿಯ ಇತಿಹಾಸವು ಇದನ್ನೇ ಸಾರುವದಿಲ್ಲವೆ? ಹವೆ, ನೀರುಗಳನ್ನು ಹೇಗೆ ಮಾನವಕೋಟಿಯ ಸಲುವಾಗಿ ದೇವರು ಹುಟ್ಟಿಸಿರುವನೋ, ಅದರಂತೆಯೇ ಭೂಮಿಯನ್ನೂ ಹುಟ್ಟಿಸಿರುವನು. ಅಂದ ಮೇಲೆ ಭೂಮಿಯ ಮೇಲೆ, ಅದರ ಭೂಗರ್ಭದ ಮೇಲೆ, ಮಾನವ ಜನಾಂಗದ ಹಕ್ಕು ಇದೆ. **ಇದು ನನ್ನದು** ಎಂದು ಹೇಳಲು ಯಾರಿಗೂ ಅಧಿಕಾರವಿಲ್ಲ. ಆದರೆ ಇಂದು ನಡೆಯುವದೇನು? ಮಾನವರು ತಮ್ಮ ಬಲದಿಂದ ಎಲ್ಲ ಹಕ್ಕುಗಳನ್ನು ಕಸಿದುಕೊಂಡಿದ್ದಾರೆ. ಕಳೆದಿದ್ದಾರೆ. ಬಂದು ಸಂಸ್ಥಾಪಿಸಿದರೂ, ಜಮೀನದಾರರೂ ತಮ್ಮ ಅಧೀನದಲ್ಲಿರುವ, ಭೂಮಿಯ ಒಡೆಯರು ತಾವೇ ಎಂದು ಹೇಳತೊಡಗಿದ್ದಾರೆ. ಅದನ್ನು ಉಪಯೋಗಿಸಿಕೊಳ್ಳಲಿಕ್ಕೆ ಅಪ್ಪಣೆಕೊಡಲು ರೈತರಿಂದ ತೆರಿಗೆ ಎತ್ತುವರು ಅವರು ಅನ್ನುವದು ಇಷ್ಟೇ, ಭೂಮಿಯ ಒಡೆಯರು ನಾವು ಅದು ನಮ್ಮ ಮಾಲ್ಕಿ ಹಕ್ಕಿನದು.

ಸ್ವಲ್ಪ ವಿಚಾರ ಮಾಡಿದರೆ, ಆ ಸಂಸ್ಥಾಪಿಕರಾಗಲೀ, ರಾಜರಾಗಲೀ, ಜಮೀನುದಾರರಾಗಲೀ, ಇದು ನಮ್ಮದು ಎಂದು ಹೇಳುವ ಭೂಮಿಯನ್ನು ತಾವಾಗಲೀ ಕೇವಲ ತಮ್ಮ ಮನೆತನದವರಾಗಲೀ ತಮ್ಮ ಶ್ರಮದಿಂದಲೇ ಮಾಡಿದುದು ಅಲ್ಲ. ಅದನ್ನು ಇಡೀ ಜನಾಂಗವೇ ಮಾಡಿರಬಹುದು. ಇಲ್ಲವೇ ಅಲ್ಲಿಯ ಮೂಲ ನಿವಾಸಿಗಳನ್ನು ಹೊರ ದೋಡಿಸಿ ಆಕ್ರಮಿಸಿರಬಹುದು. ಅಂದಮೇಲೆ ಇದು ನನ್ನದು ಎಂದು ಹೇಳುವ ಅಧಿಕಾರವೆಲ್ಲಿಂದ ಬಂತು? ಇದೆಲ್ಲವೂ ಜುಲುಮೆ, ಅಧಿಕಾರ ಬಲದಿಂದ ಕಿತ್ತುಕೊಂಡು, ಬಲದಿಂದಲೇ ಅದಕ್ಕೆ ನೀತಿಯ ಸ್ವರೂಪ ಕೊಟ್ಟದ್ದೆಂದು ಕಾಣುವದಿಲ್ಲವೇ?

ಸಮಾಜವೆಲ್ಲವೂ ತಮಗೆ ಬೇಕಾದಷ್ಟು ಭೂಮಿ ಸಾಗುಮಾಡಿಕೊಂಡು, ತಮ್ಮ ಜೀವರಕ್ಷಣೆಗೆಂದು ತಾವು ಗೆದ್ದವರಲ್ಲಿ ನಾಯಕನಿಗೆ ಸಲ್ಲಿಸುತ್ತ ಬಂದುದನ್ನು ಹಿಂದೆಯೇ ನಾವು ವಿವರಿಸಿದ್ದೇವೆ. ಆದರೆ,

ಅವೇ ನಾಯಕನು ತನ್ನ ಬಲದಿಂದ ಅದಕ್ಕೆಲ್ಲ ತಾನೇ ಒಡೆಯನೆಂದು ಹೇಳಿ, ವಯ್ಯಕ್ತಿಕ ಸ್ವತ್ತು ಮಾಡಿಕೊಳ್ಳುವದು ಯೋಗ್ಯವೇ? ಯಂತ್ರ ಯುಗದಲ್ಲಿ ಅದನ್ನೇ ಬಾಂಡವಲವೆಂದು ಉಪಯೋಗಿಸಿ, ರಾಷ್ಟ್ರದ ಧನೋತ್ಪಾದನೆಯಲ್ಲಿ ಬಹು ಅಂಶವನ್ನು ಕಸಿದುಕೊಳ್ಳುವದು ನ್ಯಾಯವೆ? ಇದು ಇಂದು ಸಮಾಜದ ನೀತಿಯಾಗಿ ಹೋಗಿದೆ. ಬಲದ ಮುಂದೆ ಬಗ್ಗದವರಾರು?

ಮೇಲಿನ ಕಾರಣದಿಂದಲೇ ಭೂಮಿಯು ರಾಜನ ಮಾಲ್ಕಿಯದು, ಅಂದರೆ ರಾಷ್ಟ್ರದ್ದು, ಯಾವ ವ್ಯಕ್ತಿಯದೂ ಅಲ್ಲ. ಎಂದು ಎಲ್ಲ ದೇಶದ ಕಾಯಿದೆಗಳಲ್ಲಿ ಹೇಳಿರುವದು. ರಾಷ್ಟ್ರವು (State Can resume the land) ಬೇಕಾದಾಗ ಅವುಗಳನ್ನು ತೆಗೆದುಕೊಳ್ಳಬಹುದು. ಆದರೆ ಎಂದೂ ಹೀಗೆ ಮಾಡಿಲ್ಲ. ಆದ್ದರಿಂದಲೇ ಭೂಮಿಯು ವೈಯಕ್ತಿಕ-ಮಾಲ್ಕಿಯದೆಂದೇ ಅದರ ಉಪಯೋಗಮಾಡುವ ಪದ್ಧತಿಯುಂಟಾಗಿದೆ. ರಾಜರೂ ತಮ್ಮ ಕರ್ತವ್ಯ ಮರೆತು, ಎಲ್ಲವೂ ವ್ಯಕ್ತಿ ಒಡೆತನದ್ದೆಂದು ತಿಳಿಯತೊಡಗಿದ್ದಾರೆ. ಜಮೀನದಾರರು, ಸಂಸ್ಥಾನಿಕರಾದರೂ, ಅನಧಿಕಾರದಿಂದ ಸಮಾಜದ ಸಂಪತ್ತನ್ನು ಕೀಳುಯುವದು ಸಮಾಜದ ರೂಢಿಯೇ ಆಗಿದೆ. ಈ ವಯ್ಯಕ್ತಿಕ ಒಡೆತನವೇ ಈ ಎಲ್ಲ ಅನರ್ಥಕ್ಕೆ ಮೂಲವು.

ಹೀಗೆ ವರ್ಗವೆಲ್ಲವೂ ಭೂಮಿಯ ಮೇಲೆ ತಮ್ಮ ಮಾಲ್ಕೀಹಕ್ಕು ಕೂಡಿಸಿ, ಧನಸಂಗ್ರಹಮಾಡಿ, ಬಾಂಡವಲದಾರರಾದರು. ಬಂಡವಲವನ್ನು ಬೆಳಿಯಿಸುವ ಉದ್ದೇಶದಿಂದ ಧನೋತ್ಪಾದನ ಸಾಧನಗಳನ್ನು ವಶಪಡಿಸಿಕೊಂಡರು. ಯಂತ್ರಯುಗವು ಪ್ರಾರಂಭವಾದಂದಿನಿಂದಂತೂ ಇದಕ್ಕೆ ಮಿತಿಯೇ ಉಳಿಯಲಿಲ್ಲ. ದುಡಿಯುವವನಿಗೆ, ಉದರಂಭರಣಕ್ಕೆ ಮಾತ್ರ ಕೊಟ್ಟು, ಉಳಿದದ್ದನ್ನೆಲ್ಲ ಕೀಳಿಯುಹತ್ತಿದರು. ಕೂಲಿಕಾರನು ಜೀವನಕ್ಕೆ ಮಾತ್ರ ಅಧಿಕಾರಿ ಹೀಗೆ ಸಂಪತ್ತನ್ನು ಕೀಳಿಯುವ ಮೋಹವು ವ್ಯಕ್ತಿಒಡೆತನದ್ದು. ಅಂದ ಮೇಲೆ, ಈ ಬಂಡವಲದಾರನು ಒಡೆತನದ್ದು (Private Oner ship) ಎಂಬ ಅನ್ಯಾಯದ ತಳಹದಿಯ ಮೇಲೆ ನಿಂತಿದೆ.

ಈ ವ್ಯಕ್ತಿ ಒಡೆತನವೇ ಸಮಾಜವನ್ನು ಹಾಳು ಮಾಡಿದೆ. ಧನೋತ್ಪಾದಕ ಸಾಧನಗಳಾದ ಭೂಮಿ ಕಾರಖಾನೆ ಮೊದಲಾದವುಗಳೆಲ್ಲವೂ ವ್ಯಕ್ತಿಗಳ ಸ್ವತ್ತಿನಿಂದ ಕೇವಲ ವ್ಯಕ್ತಿಗಳು ರಾಷ್ಟ್ರದ ಮಾನವ ಜನಾಂಗದ ಸಂಪತ್ತನ್ನೆಲ್ಲ ಕಿಳೆದುಕೊಂಡು ಕುಬೇರರಾಗಿ ಬಹುಜನ ಸಮಾಜವನ್ನು ದುಃಖದಲ್ಲಿ ಮುಳುಗಿಸಿದ್ದಾರೆ. **ಈ ವ್ಯಕ್ತಿ ಒಡೆತನವೇ ಸಾಮಾಜಿಕ ರೋಗಗಳ ಮೂಲ.** ವ್ಯಕ್ತಿಗಳು ಸ್ವಾರ್ಥೈಕ ದೃಷ್ಟಿಯುಳ್ಳವರು. ಜಗತ್ತು ಬಾಳಲಿ, ಬೇಕಾದರೆ ಸಾಯಲಿ, ತಮ್ಮ ಲಾಭವಾದರೆ ತೀರಿತು ಎಂಬುದೊಂದೇ ಇವರ ದೃಷ್ಟಿ, ಆ ದೃಷ್ಟಿಯಿಂದಲೇ ಬಾಂಡವಲವಾದವು ಬೆಳೆದಿದೆ. ಮನುಷ್ಯನಿಗೆ ತಾನು ಸುಖದಿಂದ ಇದ್ದಂತೆ, ತನ್ನ ಮಕ್ಕಳೂ ಸುಖದಿಂದ ಬಾಳಬೇಕೆಂಬ ಇಚ್ಛೆಯು ಸ್ವಾಭಾವಿಕವಿರುವದರಿಂದ ಬಾಂಡವಲಗಾರರು ನ್ಯಾಯ, ಅನ್ಯಾಯ, ಹಿಂಸೆ, ಅಹಿಂಸೆ ಯಾವದನ್ನೂ ಲೆಕ್ಕಿಸದೆ ಬಾಂಡವಲವನ್ನು ಬೆಳೆಸುವದೊಂದೇ ಕಣ್ಣು ಮುಂದೆ ಇಟ್ಟುಕೊಂಡು ಮುಂದೆ ಸಾಗುವರು. ಯಾವದೊಂದು ವಸ್ತುವು ಸಮಾಜಕ್ಕೆ ಹಿತವಿದ್ದು ಅವನ್ನು ಹಬ್ಬಿಸುವದರಿಂದ ಲಾಭವಿಲ್ಲೆಂದು ಕಂಡುಬಂದರೆ ಅವರು ಬಂಡವಲವನ್ನು ಎಂದೂ ಆ ಕೆಲಸಕ್ಕೆ ಉಪಯೋಗಿಸಲಾರರು. ಇದರ ವಿರುದ್ಧವಾಗಿ ಯಾವದೊಂದು ವಸ್ತುವಿನ ಉಪಯೋಗದಿಂದ ರಾಷ್ಟ್ರಕ್ಕೆ ಅಹಿತವಾಗುತ್ತಿದ್ದು ತಮಗೆ ಲಾಭವಾಗುತ್ತಿದ್ದರೆ, ಅಂಥದಕ್ಕೆ ಅದನ್ನು ಉಪಯೋಗಿಸಲು ಅವರು ಹಿಂದುಮುಂದೆ ನೋಡುವದಿಲ್ಲ. ಉದಾಹರಣೆಗಾಗಿ, ಉತ್ತಮವಾದ ಭೂಮಿಗಳಲ್ಲಿ ಎಷ್ಟೋ ಜನರು ಸಿಂದೀ ಗಿಡಗಳನ್ನು ಬೆಳಿಸಿದ್ದನ್ನು ನಾವು ನೋಡುವದಿಲ್ಲವೇ! ಎಷ್ಟೋ ಜನ ಬಾಂಡವಲದಾರರು ಲಾಭದಾಶೆಯಿಂದ ಬ್ರ್ಯಾಂಡಿ, ವ್ಹಿಸ್ಕಿಗಳ ಕಾರಖಾನೆಗಳನ್ನು ತೆರೆದಿಲ್ಲವೆ! ವಿಪರೀತವಾಗಿ ಬೆಳೆದ ಮದ್ದುಗುಂಡಿನ ಕಾರಖಾನೆಗಳು ಏನನ್ನು ಸೂಚಿಸುತ್ತವೆ? ಅಂದರೆ, ಸಮಾಜದ ಹಿತದ ದೃಷ್ಟಿಯಿಂದ ಅವಶ್ಯವಿರುವ ಕೆಲಸಗಳು ಲಾಭದಾಯಕವಿದ್ದರೆ ಮಾತ್ರ ಅವರು ಕೈಕೊಳ್ಳುವರು. ಇದರಿಂದ ಬಂಡವಲದಾರರೆಲ್ಲ ಹೀಗೆಯೇ ಇರುವರೇ? ಒಳ್ಳೆಯವರಿಲ್ಲವೆ? ಎಂದು ಕೇಳಬಹುದು. ಇಲ್ಲವೆಂದಲ್ಲ ಒಬ್ಬಿಬ್ಬರು ಇರಬಹುದು ಆದರೆ ಸದ್ಯದ ಜಗತ್ತಿ

ನಲ್ಲಿ ಬಂಡವಲದಾರರ ದೃಷ್ಟಿಯಿಂದ ಅವರು ಮೂರ್ಖರೆಂದು ಪರಿಗಣಿಸ ಲ್ಪಟ್ಟು ಸಮಾಜದಲ್ಲಿ ತಲೆ ಎತ್ತಲಾರರು. ಕೆಲವೊಂದು ವ್ಯಕ್ತಿಗಳ ಪ್ರಶ್ನೆ ಯನ್ನು ಬಿಟ್ಟರೆ ಬಂಡವಲದಾರ ವರ್ಗದ ಮುಂದೆ ಲಾಭದ ಆಶೆಯೊಂದೇ ಮಾತ್ರ ಕಂಡು ಬರುವದು.

ಹೀಗೆ ವ್ಯಕ್ತಿಗಳ ಒಡೆತನವೇ ಜಗತ್ತಿನಲ್ಲಿ ಆರ್ಥಿಕ ಅಸಮಾನತೆಗೆ, ಅನರ್ಥ ಪರಂಪರೆಗೆ ಮೂಲವು. ಇದನ್ನು ಅಳಿಯದ ಹೊರತು ಜಗತ್ತಿ ನಲ್ಲಿ ಸುಖ ಶಾಂತಿಗಳು ನೆಲೆಗೊಳ್ಳಲಾರವು.

ಈ ಮಾಲ್ಕಿ ಹಕ್ಕಿನ ಸಮರ್ಥನೆಗಾಗಿ ಬಂಡವಲದಾರರು ಇನ್ನೊಂದು ಮಾತನ್ನು ಮುಂದೆ ಮಾಡುವರು. ಮಾಲ್ಕಿಹಕ್ಕಿನ ಮೋಹವು ಇಲ್ಲವಾದರೆ, ಯಾರೂ ಉಳಿಸಲು ಯತ್ನಿಸುವದೇ ಇಲ್ಲ. ಎಲ್ಲವನ್ನೂ ಕಾಲಕಾಲಕ್ಕೆ ತಿಂದು ನಾಶ ಮಾಡಿದರೆ, ಉದ್ಯೋಗ ಬೆಳೆ ಸಲು ಬಂಡವಲವು ಎಲ್ಲಿಂದ ಬರಬೇಕು? ಬಂಡವಲ ಇದ್ದುದೇ ಇಷ್ಟೆಲ್ಲ ಮಾನವ ಪ್ರಗತಿಗೆ ಅನುಕೂಲವಾಗಿದೆ. ವೈಜ್ಞಾನಿಕ ಶೋಧಗಳನ್ನು ಕಾರ್ಯರೂಪಕ್ಕಿಳಿಸಲು ಬಂಡವಲವೇ ಮುಖ್ಯ ಸಾಧನವು. ಮಾನವನ ಕಲ್ಯಾಣಕ್ಕಾಗಿ, ಶ್ರಮ ಉಳಿಸುವ ಶೋಧದ ಪ್ರಯೋಗಕ್ಕಾಗಿ, ಧನೋ ತ್ಪಾದನೆಯ ಕಾರ್ಯದಲ್ಲಿ ಬಂಡವಲು ಬೇಕೇಬೇಕು. ಯಾರಿಗೂ ಉಳಿಸುವದರಿಂದ ಲಾಭವೆನಿಸದಿದ್ದರೆ, ಬಂಡವಲವು ಕೂಡುವದೇ ಇಲ್ಲ. ಮಾನವ ಪ್ರಗತಿಯೇ ಕುಂಠಿತವಾಗುವದು. ಇತ್ಯಾದಿ ವೇದಾಂತದ ಉಪದೇಶವನ್ನು ಹೇಳುವರು.

ಹೀಗೆ ಮಾಲ್ಕೀ ಹಕ್ಕಿನ ಮೋಹದಿಂದ ಉಳಿಸಲು ಜನರು ಪ್ರಯತ್ನ ಪಡುತ್ತಿರುವರೆಂದೇ ಜಗತ್ತಿನಲ್ಲಿ ಇಷ್ಟು ದಾರಿದ್ರ್ಯ ಪಸರಿಸಿ ದುಃಖವು ಹೆಚ್ಚಿದೆ. ಶಿಲುಕು ಇಡುವದು ಶುದ್ಧ ಭ್ರಮೆ. ನಾವು ಯಾವದನ್ನೂ ಶಿಲುಕು ಇಡಲಾರೆವು. ಆಹಾರ ಸಾಮಗ್ರಿಗಳು ಆಗಿಂದಾಗಲೇ ಉಪ ಯೋಗ ಮಾಡದಿದ್ದರೆ ಕೆಟ್ಟು ಹೋಗುತ್ತವೆ. ನನ್ನಲ್ಲಿ ಹತ್ತು ಆಕಳು ಗಳಿವೆ. ದಿನಾಲು ಹತ್ತು ಸೇರು ಹಾಲು ಕೊಡುತ್ತವೆ ಎಂದು ತಿಳಿ ಯೋಣ. ನಾನು ಒಂದು ಸೇರು ಹಾಲು ಉಪಯೋಗಿಸಿ, ಸೂರು

ಸೇರನ್ನು ನಿಲುಕಿಸಿ ಇಡಬಹುದೋ? ಹಾಲನ್ನು ಹಾಗೆ ಇಡಲು ಸಾಧ್ಯ ವಿಲ್ಲ. ನಾನು ಒಳ್ಳೇ ಜಾಣನಾದರೆ ಅದನ್ನು ಕೂಡಲೇ ಉಪಯೋಗಿ ಸುವ ಬೇರೊಬ್ಬನಿಗೆ ಕೊಟ್ಟು, ಹತ್ತು ರೂಪಾಯಿ ದೊರಕಿಸಬಹುದು. ಹತ್ತು ರೂಪಾಯಿ ಅಂದರೇನು? ಮುಂದೆ ನನಗೆ ಬೇಕಾದಾಗ ನೂರು ಸೇರು ಹಾಲನ್ನೋ, ಇಲ್ಲವೆ ನನಗೆ ಬೇಕಾದರೆ ಗೋದಿಯನ್ನೋ, ಅಕ್ಕಿ ಯನ್ನೋ, ಅರಿವೆಯನ್ನೋ ದೊರಕಿಸಲು ಬರುವ ಒಂದು ಸಾಧನ. ಆದರೆ ಈ ಎಲ್ಲ ಪದಾರ್ಥಗಳು ಸಮೃದ್ಧಿ ಇದ್ದರೆ, ನನಗೆ ಹೇಗೆ ಹಾಲು ಹೆಚ್ಚಾಗಿ ಉಳಿದತ್ತೋ ಹಾಗೆಯೇ ಉಳಿದವರಿಗಾದರೂ ನನಗೆ ಬೇಕಾದ ಪದಾರ್ಥವು ಹೆಚ್ಚಾಗಿ ಉಳಿದಿದ್ದರೆ ಮಾತ್ರ, ನನಗೆ ಸಿಗಲು ಸಾಧ್ಯ. ಇಲ್ಲ ವಾದರೆ ನನ್ನಲ್ಲಿ ಕೋಟಿ ರೂಪಾಯಿಗಳಿದ್ದರೂ ನಾನು ಉಪವಾಸ ಸಾಯ ಬಹುದು. ಹಿಂದೆ ಹೋಗಿ ಬರದ ಕಾಲಕ್ಕೆ ಹಣದ ಹುಮ್ಮಿಣಿ ತಲೆ ದಿಂಬಿಗಿಟ್ಟುಕೊಂಡು ಸತ್ತರಂತೆ! ಕಾರಣವಿಷ್ಟೇ ಅವರ ಹಣವೆಲ್ಲ ನಿರು ಪಯುಕ್ತವಾಗುವಂತಹ ಪ್ರಸಂಗವಿತ್ತು. ಉಳಿಸಿದರೆ ಒಂದು ಸೇರು ಅಕ್ಕಿಗೆ ನೂರು ರೂಪಾಯಿ ದೊರಕಿಸುವ ಸಂಧಿ, ಎಲ್ಲವೂ ಇದ್ದರೂ ಉಳಿಸಲು ಯಾರಿಗೂ ಸಾಧ್ಯವಿಲ್ಲ.

ಮೇಲಿನ ಮಾತಿನಿಂದ ಸ್ಪಷ್ಟವಾಗಿ ತಿಳಿದುಬರುವದಿಷ್ಟೇ ನಮಗೆ ಕೆಲವು ಪದಾರ್ಥಗಳು ಹೆಚ್ಚಾದರೆ ಅವುಗಳನ್ನು ಕೂಡಲೇ ವಿನಿಮಯ ಮಾಡಿ ಅವುಗಳ ಬೆಲೆಯನ್ನು ಉಳಿಸಬೇಕಾಗುವದು. ಕೆಲವು ಪದಾರ್ಥ ಗಳು ಕಡಿಮೆಯಾದರೆ ನಾವು ಅವುಗಳ ಹತ್ತುಪಟ್ಟು ಬೆಲೆ ಕೊಟ್ಟರೂ ದೊರೆಯವು. ಇದರಿಂದ ಬಂಡವಲಗಾರರು ಹೇಳುವ ಮಾತಿನಲ್ಲಿ ಹುರು ಳಿಲ್ಲನೆಂದು ಸಿದ್ಧವಾಗುವದು. ನಮಗೆ ಸಮೃದ್ಧಿಯಾದರೆ ನಾವು ಕೆಡಿಸು ವುದಕ್ಕಿಂತ ಬೇಕೆಯುವರಿಗೆ ಕೊಟ್ಟೇ ಕೊಡುವೆವು. ಇದರಿಂದಲೇ ನಿಜ ವಾದ (Spare money) ಬಂಡವಲು ಸಿದ್ಧವಾಗುವದು. ಆದರೆ ಮಾಲ್ಕೀ ಹಕ್ಕಿನ ಪದ್ಧತಿಯು ಉಳಿಸಲು ಪ್ರಚೋದಗೊಳಿಸುವದೆಂದು ಹೇಳುವವರಿಂದ ಬಂಡವಲವಾದಿಗಳು ಸಮಾಜದ ಬೇಕು-ಬೇಡುಗಳನ್ನು ಪರವಿಗೆ ತಾರದೇ ತಮ್ಮ ಲಾಭಕ್ಕಾಗಿ ಅದೆಷ್ಟೋ ಅಪ್ರಾಮಾಣಿಕ, ಅನ್ಯಾಯಗಳನ್ನು ಬಳಕೆಯಲ್ಲಿ ತಂದು ಸಮಾಜದ ಜೀವನವನ್ನು ದುಃಖ

ಮಯವಾಗಿ ಮಾಡಬಹುದು. ಇದನ್ನು ಸ್ವಲ್ಪ ಸ್ಪಷ್ಟವಾಗಿ ತಿಳಿಸ ಬೇಕಾದರೆ ಹೀಗೆ ಹೇಳಬಹುದು:

ನನ್ನ ಮರಣದ ತರುವಾಯ ನನ್ನ ಆಸ್ತಿಯನ್ನೆಲ್ಲ ಸರಕಾರದವರು ತಕ್ಕೊಳ್ಳುವರೆಂದು ಕಾನೂನು ಆಗದೆ, ಎಂದರೆ ನಾನು ಉಳಿಸಲಿಕ್ಕೆ ಪ್ರಯತ್ನ ಮಾಡಲಿಕ್ಕಿಲ್ಲ. ಆದರೆ ನನ್ನ ಹೊಲದಲ್ಲಿ ಪ್ರತಿ ವರ್ಷ ನೂರು ಚೀಲ ಗೋದಿ ಬೆಳೆಯುತ್ತದೆ. ನಾನು ಅದನ್ನೇನು ಮಾಡಬಹುದು? ಬೇಕಾದರೆ ಹಾಗೇ ಬಡವರಲ್ಲಿ ಹಂಚಬಹುದು, ಮಾರಿ ಹಣವನ್ನು ಬ್ಯಾಂಕಿನಲ್ಲಿ ಇಡಬಹುದು. ಆದರೆ ನಾನು ಗಳಿಸಿದಷ್ಟು ಹಣ ನನ್ನ ಮಕ್ಕಳಿಗೆ ಉಳಿಯುವದೆಂದು ಕಾಯದೆ ಇರುವದರಿಂದ ನಾನು ಏನಕೇನ ಪ್ರಕಾರೇಣ ದುಡ್ಡು ಗಳಿಸಲಿಕ್ಕೆ ಪ್ರಯತ್ನಮಾಡಹತ್ತುವೆನು. ಸ್ವಲ್ಪ ಬರಗಾಲದ ಲಕ್ಷಣ ತೋರಿದರೆ ನನ್ನಲ್ಲಿ ಇದ್ದಷ್ಟು ದುಡ್ಡು ಹಾಕಿ ಧಾನ್ಯ ಗಳನ್ನು ಕೊಂಡು ಇಡುವೆ. ಬರ ಬಿತ್ತು. ಮೊದಲಿನ ಬೆಲೆಯ ಎರಡಷ್ಟು ತೆಗೆದುಕೊಂಡು ಆದೇ ಧಾನ್ಯ ಮಾರುವೆ. ಹೀಗೆ ನನ್ನ ಒಂದೇ ಒಂದು ವ್ಯವಹಾರದಿಂದ ಸಾವಿರಾರು ಜನರ ಕಿಸೆಯಿಂದ ಹಣ ಸೆಳೆಯಲು ನಾನು ಹಿಂದೆ ಮುಂದೆ ನೋಡುವದಿಲ್ಲ. ಆದರೆ ನನಗೆ ಯಾರೂ ಕಳ್ಳನೆನ್ನುವ ಧೈರ್ಯ ಮಾಡರು. ಇದಕ್ಕೆ ಎಲ್ಲರೂ 'ವ್ಯವಹಾರ' ವೆಂದೇ ಕರೆಯು ವರು. ಇದರಂತೆಯೇ ಬಡವನಿಗೆ ಪ್ರಸಂಗ ಬಂದಿದೆ ಎಂದು ಗೊತ್ತಾದರೆ ಒಳ್ಳೇ ದಯಾವಂತನಂತೆ ಅವನಿಗೆ ಉಪಕಾರ ಮಾಡಿದವನಂತೆ ಮಾಡಿ, ಅವನಿಂದ ಬಡ್ಡಿ ಎಂದು ಹಣ ಕೆತ್ತಬಹುದು. ಗಂಟಿನ ನಾಲ್ಕು ಪಟ್ಟು ಆ ಬಡವನು ಬಡ್ಡೀ ಕೊಟ್ಟರೂ ನಾನು ಅವನನ್ನು ಕೋರ್ಟಿಗೆ ಎಳೆದು ವ್ಯಾಜ್ಯ ಹೂಡಿ, ಮತ್ತೂ ದಾಮದುಪ್ಪಟ್ಟು ಕೊಡಿಸಲು ಕೋರ್ಟಿನಿಂದ ಹುಕ್ಕುಂನಾಮೆಯ ಪಡೆದು ಅವನ ಮನೆಮಾರು, ಆಸ್ತಿ ಎಲ್ಲ ಜತ್ತಿ ಹಾಕಬಹುದು. ಆದರೆ ನನಗೆ ಒಬ್ಬರೂ ದರೋಡೆಖೋರನೆನ್ನುವ ಧೈರ್ಯವಾದರಲ್ಲವೇ!

ಹೀಗೆ ಮಾಲ್ಕೀ ಹಕ್ಕು ಮನುಷ್ಯರನ್ನು ರಾಕ್ಷಸರನ್ನಾಗಿ ಮಾಡು ತ್ತಿದೆ. ಬಂಡವಲು ದೇಶದ ಧನೋತ್ಪಾದನೆಯು ಹೆಚ್ಚಾದಂತೆ ತಾನೇ

ಉಳಿದೇ ಉಳಿಯುವದು. ಬಂಡವಲು ಬೇಕೆಂದು **ಮಾಲ್ಕೀ ಹಕ್ಕಿನ ಭೂತಕ್ಕೆ** ಕಣ್ಣು ಮುಚ್ಚುವ ಕಾರಣವೇ ಇಲ್ಲ.

ಇಷ್ಟೆಲ್ಲ ಅನರ್ಥಕ್ಕೂ ಬಂಡವಲವಾದದ ಮೂಲತತ್ವವಾದ ಮಾಲ್ಕೀ ಹಕ್ಕು. ಈ ಮಾಲ್ಕೀ ಹಕ್ಕು ಒಂದು ಇಲ್ಲದಿದ್ದರೆ ಬಂಡವಲವು ಎಂದೂ ಯಾವದೇ ಒಬ್ಬನ ಸ್ವತ್ತು ಎಂದು ಬೆಳೆಯುತ್ತಿರಲಿಲ್ಲ. ಹಾಗೆ ಆಗದೇ ಇದ್ದರೆ ಎಲ್ಲ ಬಂಡವಲವು ಸಮಾಜದ ಸ್ವತ್ತು ಎಂದು ಸಮಾಜದ ಮುಖವಾದ ಸರಕಾರವು ಅದನ್ನು ಧನೋತ್ಪಾದನೆಯ ಕೆಲಸಕ್ಕೆ ಹಚ್ಚಿ, ಬಂದ ಲಾಭಕ್ಕೆಲ್ಲ ಸಮಾಜ ಒಡೆತನ ಎಂದು ಅದನ್ನು ಸಮಾಜದಲ್ಲಿ ಸರಿಯಾಗಿ ಎಲ್ಲರಿಗೂ ಮುಟ್ಟುವಂತೆ ಹಂಚುತ್ತಿತ್ತು. ಇದರಿಂದ ಸಮಾಜವೆಲ್ಲ ಧನೋತ್ಪಾದನೆಯ ಒಂದಿಲ್ಲೊಂದು ಕೆಲಸದಲ್ಲಿ ದುಡಿಯಲೇ ಬೇಕಾಗುತ್ತಿತ್ತೆಂದು ಬೇರೆ ಹೇಳಬೇಕಾಗಿಲ್ಲ. ಹೀಗೆ ಎಲ್ಲರೂ ದುಡಿಯಬೇಕು. ರಾಷ್ಟ್ರದ ಉತ್ಪನ್ನದಲ್ಲಿ ಎಲ್ಲರಿಗೂ ಸರಿಯಾದ ಪಾಲು ಮುಟ್ಟಬೇಕು ಎಂಬುದೇ ಸಾಮ್ಯವಾದದ ತತ್ವ. ಇದರ ವಿವರಣೆಯೇ ಮುಂದಿನಪ್ರಕರಣ.



# ಸಾಮ್ಯವಾದದ ಸಿದ್ಧಾಂತ

೫

●

ವ್ಯಕ್ತಿ ಒಡೆತನವು ಜಗತ್ತಿನ ಸ್ವಾತಂತ್ರ್ಯವನ್ನು ಹರಣ ಮಾಡಿತು. ಸ್ವಾರ್ಥಕ್ಕಾಗಿ ಸಾಮ್ರಾಜ್ಯಗಳನ್ನು ಬೆಳೆಯಿಸಿತು. ದುಡ್ಡಿನ ಬಲದಿಂದ ರಾಷ್ಟ್ರದ ರಾಜ್ಯಸೂತ್ರಗಳನ್ನೆಲ್ಲ ಅಂಕಿತದಲ್ಲಿಟ್ಟುಕೊಂಡು, ರಾಷ್ಟ್ರ ರಾಷ್ಟ್ರಗಳನ್ನು ಕುಣಿಸಹತ್ತಿತು. ಇಡೀ ಮಾನವ ಜನಾಂಗದ ಮನಃಪ್ರವೃತ್ತಿಯನ್ನೇ ಬದಲುಮಾಡಿ ಸ್ವಾರ್ಥಮಯ ಮಾಡಿತು. ಧನೋತ್ಪಾದನೆಯ ಸಾಧನೆಗಳೆಲ್ಲ ವ್ಯಕ್ತಿಗಳ ಹಸ್ತಗತವಾಗಹತ್ತಿದ್ದರಿಂದ, ಸಂಪತ್ತಿನ ಪ್ರವಾಹವು ವ್ಯಕ್ತಿಗಳ ಕಡೆಗೆ ಹರಿಯತೊಡಗಿತು. ಈ ಪ್ರವಾಹವು ಅವ್ಯಾಹತವಾಗಿ ಹರಿಯುವಂತೆ ಕಾನೂನುಗಳನ್ನು ಮಾಡಿಕೊಂಡಿತು. ಆದರೇನು ? ಈ ಬಂಡವಲವಾದದ ಮೂಲ ಸಿದ್ಧಾಂತಗಳೇ ಆಸುರಿ ವೃತ್ತಿಯವಿದ್ದುದರಿಂದ ಅದರ ದುಷ್ಪರಿಣಾಮಗಳು ಕಾಣಲು, ಕಾಲವು ಬೇಕಾಗಲಿಲ್ಲ. ಬಂಡವಲವಾದದ ಈ ಸ್ವಾರ್ಥದ ದೃಷ್ಟಿಯು ಕೂಡಲೆ ಬೈಲಿಗೆ ಬಂದಿತು.

ಬಂಡವಲವಾದದಿಂದ ಉಂಟಾದ ಭೀಕರವಾದ ಬಡತನ, ನಿರುದ್ಯೋಗತನ, ಕೂಲಿಕಾರರ ಕೂಳಿನ ಕೂಗು, ದಾರಿದ್ರ್ಯದಿಂದಾದ ರೋಗಗಳು, ಕಲೆಯ ಹ್ರಾಸ, ಗುಲಾಮಗಿರಿ, ಯುದ್ಧ, ಮೊದಲಾದವುಗಳು ಸಾಮಾಜಿಕ ಶಾಂತತೆಯನ್ನು ಕದಡಿದವು. ಶಾಂತತೆಯಾದರೂ ಹೇಗೆ ಉಳಿಯಬೇಕು ? ತಿನ್ನಲು ಅನ್ನವಿಲ್ಲ, ಉಡಲು ಬಟ್ಟೆಯಿಲ್ಲ. ಎಲ್ಲಿ ನೋಡಿದಲ್ಲಿ ರೋಗಗಳು ವ್ಯಾಪಿಸಿಬಿಟ್ಟಿವೆ. ದುಡಿಯಲು ತ್ರಾಣವಿಲ್ಲ, ಸಾಧನಗಳಿಲ್ಲ; ಮೇಲೆ ಧನಿಕರ ದರ್ಪ, ಅಂದ ಮೇಲೆ ಕೇಳುವದೇನು ?

ರಾಷ್ಟ್ರದ ಅಧೋಗತಿಯು ! ಮಾನವ ಜನಾಂಗದ ಈ ಹಿಂಸೆಯು ತತ್ವಜ್ಞಾನಿಗಳ ಅಂತಃಕರಣವನ್ನು ಕಲಕಿತು. ಕೂಲಿಕಾರರ ಕರುಳಿನ ಕೂಗು ಧರ್ಮಿಷ್ಠರನ್ನು ಮರುಗಿಸುತ್ತಿತ್ತು. ನಿರುದ್ಯೋಗಿಗಳ ಹೊಟ್ಟೆಯುರಿಯು ದಾವಾನಲವಾಗಿ ಪರಿಣಮಿಸತೊಡಗಿತು. ಮನುಷ್ಯನು ಸಹನವಾಡುವದಕ್ಕೂ ಮಿತಿಯಿಲ್ಲವೆ ? ಜನರು ಕೆರಳಿದರು, ಈ ಉರಿ ಸಾಮ್ರಾಜ್ಯವಾದಕ್ಕೆ ನೊದಲುಮಾಡಿತು. ಎಲ್ಲಕ್ಕೂ ಮೊದಲು ಇಂಗ್ಲಂಡದಲ್ಲಿ ಎದ್ದಿತು ಕ್ರಾಂತಿಯ ಕೂಗು. ಯಾಕಂದರೆ, ಯಂತ್ರಗಳಿಗೆ ಇಂಗ್ಲಂಡವೇ ತವರುಮನೆಯಲ್ಲವೇ ?

ಮೊದಮೊದಲು ಕೂಲಿಕಾರರ ಗೋಳನ್ನು ಕೇಳುವವರೇ ಇದ್ದಿಲ್ಲ. ಯಾಕಂದರೆ, ರಾಷ್ಟ್ರದ ರಾಜ್ಯಸೂತ್ರಗಳೆಲ್ಲ ಧನಿಕರ ಕೈಯಲ್ಲಿ. ತಮ್ಮ ಬಂಡವಲವು ಹೇಗೆ ಬೆಳೆಯಬೇಕೆಂಬುದೊಂದೇ ಇವರ ಯೋಚನೆ. ಇವರೇ ಪಾರ್ಲಮೆಂಟಿನಲ್ಲಿ ! ಅಂದ ಮೇಲೆ ಕೇಳುವದೇನು ? ಬೆಕ್ಕಿಗೆ ಬೆಣ್ಣೆಯನ್ನು ಕಾಯಲು ಹಚ್ಚಿದಂತಾಗಿತ್ತು. ಆಗಿನ ಕಾಲದ ಪಾರ್ಲಮೆಂಟಿನಲ್ಲಿ 'Laissez Faire, Free Trade' ಎಂಬ ಧ್ವನಿಯು ಕೇಳಬರುತ್ತಿತ್ತು. ಇದರ ಅರ್ಥವಿಷ್ಟೆ ! ವ್ಯಾಪಾರ ಉದ್ಯೋಗಗಳಲ್ಲಿ ಸರಕಾರವು ಕೈಹಾಕುವದು ಸರಿಯಲ್ಲ ಬಂಡವಲದಾರರು ತಮ್ಮ ಹಿತವನ್ನು ಸರಿಯಾಗಿ ಬಲ್ಲರು. ಕೂಲಿಕಾರರೂ ಬಲ್ಲರು. ಸರಕಾರವು ಇದರಲ್ಲಿ ಕೈಹಾಕುವದು ಅವಿವೇಕ ಎಂದು ಅವರ ಗ್ರಹಿಕೆ.

ಮೇಲಿನ ತತ್ವಗಳನ್ನು ಸರಕಾರವು ಎತ್ತಿ ಹಿಡಿದದ್ದರಿಂದ, ಕೂಲಿಕಾರರ ಗೋಳಿಗೆ ಮಿತಿಯಿಲ್ಲದಾಯಿತು. ಪಶುಗಳಂತೆ ೧೬ ರಿಂದ ೧೮ ತಾಸುಗಳ ವರೆಗೆ ದುಡಿಯುವ ಹೊತ್ತು ಬಂದಿತು. ದುಡಿದರೂ ಹೊಟ್ಟೆ ತುಂಬ ಅನ್ನವಿಲ್ಲ. ಮೈತುಂಬ ಬಟ್ಟೆಯಿಲ್ಲ. ಕಣ್ಣುತುಂಬ ನಿದ್ದೆಯಿಲ್ಲ. ಇದರಿಂದ ರಾಷ್ಟ್ರದಲ್ಲಿ ಅಸಂತೋಷವು ತಲೆದೋರಿ ಬಂಡಾಯದ ರೂಪವನ್ನು ತಾಳಿತು. ಯಂತ್ರಗಳು ಧ್ವಂಸಮಾಡಲ್ಪಟ್ಟವು, ಧನಿಕರು ಜೀವ ಉಳಿಸಿಕೊಳ್ಳಲು, ಸರಕಾರದ ಮೊರೆಹೊಗಬೇಕಾಯಿತು. ಈ ಅಶಾಂತಿಯನ್ನು ನೊಂದಿಸಲು ಸರಕಾರವೂ ವಿಚಾರಮಾಡದೆ ಗತ್ಯಂತರ ಉಳಿಯ

ಲಿಲ್ಲ. 'Corn law' 'Factory Acts' 'Parliamentary Reform Act' ಇತ್ಯಾದಿ ಕಾಯಿದೆಗಳನ್ನು ಪಾರ್ಲಮೆಂಟು ಪಾಸು ಮಾಡಬೇಕಾಯಿತು. ಇದಲ್ಲದೆ, ಮತದಾನ ಅಧಿಕಾರವು ವಿಸ್ತಾರ ಮಾಡಲ್ಪಟ್ಟಿತು. ಇದರಿಂದ ಸಾಮಾನ್ಯ ಜನರಿಗೂ ರಾಜ್ಯಕಾರ ಭಾರದಲ್ಲಿ ಹಕ್ಕುಗಳು ದೊರೆತವು. ಇಷ್ಟೇ ಅಲ್ಲದೆ, ಜನತೆಯನ್ನು ಸಮಾಧಾನಪಡಿಸುವದಕ್ಕಾಗಿ, ಕೂಲಿಯ ತಾಸುಗಳನ್ನು ನಿರ್ಣಯಿಸುವ, ಚಿಕ್ಕಮಕ್ಕಳನ್ನು ದುಡಿಸಿಕೊಳ್ಳುವ ಬಗ್ಗೆ ಕಟ್ಟಳೆಗಳೂ ಆದವು. ಇಂಥಾ ಕಟ್ಟಳೆಗಳಿಗೆ ಆಗಿನ ಕಾಲದಲ್ಲಿ Socialist laws. ಎಂದು ಕರೆದರು. 'Laissez Faire' ತತ್ವದ ವಿರುದ್ಧವಿದ್ದವರೆಲ್ಲ Socialists ರೆಂದು ಕರೆಯಲ್ಪಡಹತ್ತಿದರು.

ಆದರೆ ಈ ಕ್ರಾಂತಿಯು ಇಲ್ಲಿಗೇ ನಿಲ್ಲಲಿಲ್ಲ. ಎಲ್ಲ ರಾಷ್ಟ್ರಗಳು, ನುುತ್ಸದ್ದಿಗಳು, ತತ್ವವೇತ್ತರು, ಮಾನವ ಜನಾಂಗದ ಅಧೋಗತಿಯನ್ನು ತಡೆಯಲು ವಿಚಾರಮಾಡಹತ್ತಿದರು. ತತ್ವವೇತ್ತರ ಕಣ್ಣಿಗೆ, ಇಡೀ ಯುರೋಪಖಂಡವು ಪ್ರಳಯದ ಕಡೆಗೆ ಧಾವಿಸುತ್ತಲಿದೆ ಎಂದು ಕಾಣಿಸಹತ್ತಿತು. ವಿಚಾರಮಗ್ನರಾದರು. ಮಾನವ ಜನಾಂಗದ ಏಳಿಗೆಗಾಗಿ ಯೋಚಿಸಹತ್ತಿದರು. ಹೀಗೆ ಈ ಕ್ರಾಂತಿಯು ಮಾನವನ ಜೀವನದಲ್ಲಿ ಒಂದು ಹೊಸ ಯುಗವನ್ನೇ ಪ್ರಾರಂಭ ಮಾಡಿತೆಂದೇ ಹೇಳಬಹುದು. ಇದೇ ಪತಿತೋದ್ಧಾರ. ದಾಸ್ಯದಿಂದ ತುಳಿಯಲ್ಪಟ್ಟ ಮಾನವ ಜನಾಂಗವನ್ನು ಉದ್ಧರಿಸುವದೇ ಈ ಯುಗದ ಗುಟ್ಟು.

ಈ ಸಮಯಕ್ಕೆ ಇಂಗ್ಲಂಡದಲ್ಲಿ **ರಾಬರ್ಟ ಓವೆನ್** ಎಂಬ ದಯಾಳುವು ಮುಂದೆ ಬಂದನು. ಕೂಲಿಕಾರರ ಕರುಳಿನ ಕೂಗು ಅವನ ಅಂತಃಕರಣವನ್ನು ಕರಗಿಸಿತು. ಈ ಆರ್ಥಿಕ ಅಸಮಾನತೆಗೆ, ಸ್ವಾರ್ಥವೇ ಮೂಲವೆಂದು ಕಂಡುಹಿಡಿದನು. ಕೂಲಿಕಾರರ ಗೋಳು ದೂರವಾಗ ಬೇಕಾದರೆ, ಸರಕಾರವು ಕಟ್ಟಳೆಗಳನ್ನು ಮಾಡುವದು ಅವಶ್ಯವೆಂದು ಚಳ ವಳಿಯನ್ನು ಹೂಡಿದನು. ತನ್ನ ಕಾರಖಾನೆಯಲ್ಲಿ ಕೆಲಸ ಮಾಡುವ ಕೂಲಿಕಾರರನ್ನು ಪಾಲುಗಾರರೆಂದು ಭಾವಿಸಿ, ಅವರಿಗೆ ಹೆಚ್ಚಾದ

ವಿಶ್ರಾಂತಿ, ಸಾಕಷ್ಟು ಸಂಬಳ, ರಜೆಗಳನ್ನು ಕೊಟ್ಟು ಉಪದೇಶಕ್ಕೆ ಪ್ರಾರಂಭಿಸಿದನು. ಇವನು ೨೫೦೦ ಜನ ಕೂಲಿಕಾರರನ್ನು ಕೂಡಿಕೊಂಡು, ಒಂದು ಮಾದರಿಯ ಕಾರಖಾನೆಯನ್ನು ನಡೆಯಿಸಿದನು. ಇವನೇ ಸಾಮ್ಯವಾದದ ಮೂಲ ಉತ್ಪಾದಕನು. ಇವನ ಸದ್ಬುದ್ಧಿಯು-ಭಾವನೆಯು- ಈ ಪ್ರಕಾರದ ಕಾರ್ಯ ಮಾಡಿಸಿತೆಂದು ಹೇಳಬಹುದು. ಮಾನವನ ಸ್ವಾರ್ಥವೇ ಆರ್ಥಿಕ ಅಸಮಾನತೆಗೆ ಕಾರಣವೆಂದು ಸಾರಿದನು. ಈ ಸ್ವಾರ್ಥದ ಮೂಲಕವೇ ಇಷ್ಟೆಲ್ಲ ಅನಾಹುತಗಳಾಗುವವು. ಆದುದರಿಂದ ಮಾನವನ ಹೃದಯ ಪರಿವರ್ತನೆಯೇ ಈ ರೋಗಕ್ಕೆ ಉಪಾಯವೆಂಬುದೇ ಇವನ ತತ್ವ. ಮಾನವನ ಸ್ವಭಾವವು ಸುತ್ತುಮುತ್ತಲಿನ ಪರಿಸ್ಥಿತಿಯನ್ನು ಅವಲಂಬಿಸಿರುವದು. ಆದುದರಿಂದ ಎಳೆಯ ಮಕ್ಕಳಿಗೆ ಸಮಾನತೆಯ ಧ್ಯೇಯವು ಬಿಂಬಿಸುವಂತೆ, ಶಿಕ್ಷಣ ಕೊಡಬೇಕು. ಕೆಲವು ಆದರ್ಶ ಜೀವನಗಳು ಮುಂದೆ ಬಂದರೆ, ಸಮಾಜವು ಅನುಕರಣಮಾಡುವದು. ಎಲ್ಲರ ಹೃದಯಪರಿವರ್ತನೆಯೂ ಆಗುವದೆಂದು ಪ್ರತಿಪಾದಿಸಿದನು.

ಇವನಿಗೆ ರೋಗದ ಚಿಕಿತ್ಸೆಯಾದರೂ ಅನುಪಾನವು ಮಾತ್ರ ತಪ್ಪಿತು. ಮಾನವ ಸ್ವಭಾವದ ಪೂರ್ಣ ಪರಿಚಯವು ಇವನಿಗಾಗಲಿಲ್ಲ. **ಯಾವಾಗಲೂ ಪ್ರಕೃತಿಯು ತ್ರಿಗುಣಗಳಿಂದ ಕೂಡಿರುವದೆಂಬುದನ್ನು ಅರಿಯದೆ,** ಉಪಾಯವನ್ನು ಯೋಚಿಸಿದರು. ಅದು ವಿಫಲವಾಯಿತು. ಆದರ್ಶ ಕಾರಖಾನೆಯನ್ನು ನಡೆಯಿಸಿದನು. ಮಕ್ಕಳಿಗಾಗಿ, ಶಿಕ್ಷಣ ಸಂಸ್ಥೆಯನ್ನು ತೆರೆದರು. ಆದರೆ ಹೃದಯ ಪರಿವರ್ತನೆಯ ತತ್ವವು ಮಾತ್ರ ಯಶಸ್ವಿಯಾಗಲಿಲ್ಲ. ಉಳಿದ ಬಂಡವಲದಾರರ ಬಂಡಿನ ಮುಂದೆ, ಇವರ ಆಟವೇನೂ ಸಾಗಲಿಲ್ಲ. ಇವನ ಆದರ್ಶ ಕಾರಖಾನೆಯು ಇವನ ಬಂಡವಲವು ಪೂರ್ಣ ವೆಚ್ಚವಾಗುವ ವರೆಗೆ, ನಡೆದು, ಕೊನೆಗೆ ನಾಮಶೇಷವಾಯಿತು. ಇದೇ ಕಾಲಕ್ಕೆ ಫ್ರಾನ್ಸದಲ್ಲಿದ್ದ **ಫೌರಿಡನ್, ಸೆಂಟ ಸಾಯಿಮನ್,** ಮೊದಲಾದ ಉದಾರ ಹೃದಯದ ಮಹನೀಯರೂ ಇದೇ ಮಾದರಿಯ (Utopian Socialism) ಸಾಮ್ಯವಾದವನ್ನು

ಉಪದೇಶಿಸುತ್ತಿದ್ದರು. ಸದ್ಯಕ್ಕೆ ಮಹಾತ್ಮರೂ ಕೂಡ ಹೃದಯ ಪರಿವರ್ತನದ ಮಾತುಗಳನ್ನೇ ಆಡುತ್ತಲಿದ್ದಾರೆ. ಆದರೆ **ಕಾರ್ಲಮಾರ್ಕ್ಸ್, ಫ್ರೆಡರಿಕ್ ಎಂಜಲ್ಸ** ಇವರು ಓವೆನ್ನನ ಅಪಯಶಸ್ಸಿನಿಂದ ಹೊಸ ಬೆಳಕನ್ನು ಕಂಡರು. ಕೇವಲ ಧರ್ಮೋಪದೇಶವು ಬಡತನವನ್ನು ಹಿಂಗಿಸಲಾರದೆಂದು ಅವರಿಗೆ ಅನಿಸಹತ್ತಿತು. ಬಲದ ಬೆಂಬಲವಿಲ್ಲದ ಸತ್ಯವು ಸಮಾಜದಲ್ಲಿ ಸ್ಥಾನವನ್ನು ಪಡೆಯಲಾರದೆಂದು ಸಾರಿದರು. ಕಾರ್ಲಮಾರ್ಕ್ಸನಂತೂ ಬಂಡವಲವಾದದ ಈ ದುಷ್ಪರಿಣಾಮಗಳಿಗೆ-ಆರ್ಥಿಕ ಅಸಮಾನತೆಗೆ–**ವ್ಯಕ್ತಿ ಒಡೆತನವೇಮೂಲ ಕಾರಣವು,** ಇದನ್ನು ನಾಶಮಾಡದ ಹೊರ್ತು ಆರ್ಥಿಕ ಅಸಮಾನತೆಯು ಹೋಗಲಾರದು, ಎಂದು ಸಾರಿದನು. ಹೃದಯಪರಿವರ್ತನೆಯು ಕೇವಲ ಭ್ರಮೆ, ಅಶಕ್ಯಕೋಟಿಯೊಳಗಿನದು ಎಂದು ಇವನ ಮತ. ಆರ್ಥಿಕ ಅಸಮಾನತೆಯು ಹೋಗಬೇಕಾದರೆ, ಇಡೀ ರಾಷ್ಟ್ರದ, ಆರ್ಥಿಕ ಸಾಮಾಜಿಕ ಜೀವನವನ್ನೇ ಬುಡಮೇಲು ಮಾಡದ ಹೊರ್ತು ಗತ್ಯಂತರವಿಲ್ಲೆಂದು ಗರ್ಜಿಸಿದನು. **ವ್ಯಕ್ತಿ ಒಡೆತನವು ನಾಶವಾಗಿ, ಸಂಪತ್ತೆಲ್ಲವೂ ರಾಷ್ಟ್ರದ್ದಾಗಬೇಕು, ಧನೋತ್ಪಾದನದ ಸಾಧನಗಳು, ವಿನಿಮಯ ವಿತಾರಣಗಳು ರಾಷ್ಟ್ರದ ಆಧೀನದಲ್ಲಿರಬೇಕು.** ಅಂದರೆ ಮಾತ್ರ ಶ್ರೀಮಂತರ ಆರ್ಥಿಕ ಸುಲಿಗೆಯು ನಿಲ್ಲುವದು, ರಾಷ್ಟ್ರೀಕರಣವಾಯಿತೆಂದರೆ, ದುಡ್ಡಿಗಾಗಿ ದುಡ್ಡುಗಳಿಸುವದೆಂಬ ಬಂಡವಲದಾರರ ಅರ್ಥಶಾಸ್ತ್ರದ ಮೂಲ ಸಿದ್ಧಾಂತವು ಮಣ್ಣುಗೂಡುವದು. ರಾಷ್ಟ್ರಕ್ಕಾಗಿ, ಸಮಾಜದ ಸ್ವಾಸ್ಥ್ಯಕ್ಕಾಗಿ, ಧನೋತ್ಪಾದನೆ ಎಂಬುದು, ಎಂಬ ಹೊಸ ಸಿದ್ಧಾಂತವು ಅರ್ಥಶಾಸ್ತ್ರದ ಅಡಿಗಲ್ಲಾಗುವದು. ರಾಷ್ಟ್ರೀಕರಣ ಮಾಡಿದ ಧನೋತ್ಪಾದನೆಯ ಸಾಧನಗಳಿಂದ ಇಡೀ ರಾಷ್ಟ್ರವೇ ಧನೋತ್ಪಾದನೆಯನ್ನು ಮಾಡುವದರಿಂದ ಸುಲಿಗೆಯ ಹೆಸರು ಕೂಡ ಹೇಳಹೆಸರಿಲ್ಲದಂತಾಗುವದು. ಎಂದು ಪ್ರತಿಪಾದಿಸಿದನು. ಶಾಸ್ತ್ರೀಯ ದೃಷ್ಟಿಯಿಂದ ಆರ್ಥಿಕ ಅಸಮಾನತೆಯ ಕಾರಣವನ್ನು ಕಂಡು ಹಿಡಿದು, ಬಂಡವಲವಾದದ ಭವಿತವ್ಯತೆಯನ್ನು ಚಿತ್ರಿಸುವದರಲ್ಲಿ ಇವನೇ ಮೊದಲನೇಯವನೆಂದು ಹೇಳಬಹುದು. ಇವನಿಂದಲೇ ಸಾಮ್ಯವಾದವು ರೂಪಗೊಂಡಿತು.

ಇವನಿಗೆ ಮಾನವಜಾತಿಯ ಇತಿಹಾಸವೇ ವರ್ಗಕಲಹದ ಹೊತ್ತಿಗೆಯಾಗಿ ಕಂಡಿತು. ವಿವಿಧ ಕ್ಷೇತ್ರಗಳಲ್ಲಿಯ ವಿವಿಧ ಭಾವನೆಗಳನ್ನು ಜಾಗ್ರತಗೊಳಿಸಿ, ಆರ್ಥಿಕ ಸುಲಿಗೆಯನ್ನು ಹೇಗೆ ಮಾಡುವರು ಎಂಬುದನ್ನು ಕಂಡು ಹಿಡಿದನು. ಮಾನವನ ಸಾಮಾಜಿಕ ಜೀವನವೇ ಬಂಡವಲವಾನವ ಕೈಯಲ್ಲಿ ಸರಳುತ್ತಿರುವದರಿಂದ **ಬಂಡವಲವಾದದ ಪೋಷಣೆಗೈಯುವ ಸಾಧನಗಳೆಲ್ಲ ನಾಶವಾಗಬೇಕೆಂದು** ಸಾರಿದನು.

ಯಾಂತ್ರಿಕ ರೀತಿಯಿಂದ ಧನೋತ್ಪಾದನೆಯು ಸಾಗಹತ್ತಿದ ಬಳಿಕ ಬಂಡವಲವಾದವು ರಾಷ್ಟ್ರೀಯಸಂಪತ್ತನ್ನೆಲ್ಲ ಕಳೆದುಕೊಂಡು (National wealth) ರಾಜ್ಯಸೂತ್ರಗಳ ಕೇಂದ್ರವನ್ನು ತನ್ನ ಸ್ವಾಧೀನಪಡಿಸಿಕೊಂಡಿತ್ತು. **ಅದೇ ರಾಷ್ಟ್ರೀಯ ಸಂಪತ್ತನ್ನು ರಾಷ್ಟ್ರದ ಅಧೀನ ಮಾಡಿ, ಶ್ರಮ ಜೀವಿಗಳ ಕೈಯಲ್ಲಿ ಸೇರಿಸಿದರೆ, ರಾಜಕೀಯ ಅಧಿಕಾರದ ಕೇಂದ್ರವು ಪುನರಾಗಮನಾಯಚವೆಂಬಂತೆ ರಾಷ್ಟ್ರದ ಕೈಯಲ್ಲಿ ಮತ್ತೆ ಬರುವದು ಸ್ವಾಭಾವಿಕ. ಇದೇ ರಾಜ್ಯಕ್ರಾಂತಿ.** ಹೀಗೆ **ಕಾರ್ಲಮಾರ್ಕ್ಸನು ಸಾಮ್ಯವಾದ ದೃಷ್ಟಾರನು, ಋಷಿಯು.** ಬಂಡವಲವಾದದ ವ್ಯಕ್ತಿ ಒಡೆತನವನ್ನು ಕಿತ್ತು ಬಿಸುಟಿ, ರಾಷ್ಟ್ರೀಯ **ಸ್ವಾತಂತ್ರ್ಯ, ಬಂಧುಭಾವ, ಸಮಾನತೆ** ಮೊದಲಾದವುಗಳು ಮಾನವನ ಜೀವನದಲ್ಲಿ ಉಳಿದು, ಮಾನವನು ಸುಖ-ಶಾಂತಿಗಳನ್ನು ಹೊಂದಬೇಕಾದರೆ, ಸಾಮ್ಯವಾದ ಒಂದೇ ಉಪಾಯವೆಂದು ಸಾರಿದನು. ಅವನ ವಿಚಾರಗಳನ್ನೆಲ್ಲ-ತತ್ವಗಳನ್ನೆಲ್ಲ-ಅರ್ಥಾತ್ ಸಾಮ್ಯವಾದದ ಬೀಜಮಂತ್ರಗಳನ್ನೆಲ್ಲ ಒಂದೇ ಮಾತಿನಲ್ಲಿ, ವಿವರಿಸುವದು ಕಠಿಣವಿದೆ. ಆದರೂ ಎಲ್ಲ ಸಾಮ್ಯವಾದಿಗಳಿಗೂ ಪಂಗಡಗಳಿಗೂ ಮಾನ್ಯವಾದ ಸಾಮ್ಯವಾದದ ವ್ಯಾಖ್ಯೆಯು ಕೆಳಗಿನಂತಿದೆ.

"Socialism is essentially a doctrine, and a movement, aiming at the collective organisation of the community in the interest of the mass of the pe ple by means of common ownership and collective control of the means of production."

ಪ್ರತಿಯೊಂದು ರಾಷ್ಟ್ರವೂ ಮಾನವ ಜನಾಂಗದ ಒಂದು ಭಾಗವಾಗಿ, ಬಂಧುಭಾವದಿಂದ ಬೆರೆತು, ಇಡೀ ರಾಷ್ಟ್ರದ ಸಂಪತ್ತಿಗೆಲ್ಲ ರಾಷ್ಟ್ರದಲ್ಲಿರುವವರೆಲ್ಲರೂ ಒಡೆಯರಾಗುವಂತೆ, ಮಾಡಿ ಮಾನವ ಜನಾಂಗವೇ ವಿಶ್ವಕುಟುಂಬಿಯಾಗಿ ಶಾಂತಿ, ಸುಖ, ಸಮಾಧಾನಗಳಿಂದ ಬಾಳಬೇಕೆಂಬುದೇ ಸಾಮ್ಯವಾದದ ಧ್ಯೇಯವು. ಇದನ್ನೇ ಬೇರೆ ರೀತಿಯಿಂದ ಹೇಳಬೇಕೆಂದರೆ, ತಗ್ಗುದಿನ್ನೆಗಳನ್ನೆಲ್ಲ ಸಮಮಾಡಿ ಗಿಡಗಂಟಿಗಳನ್ನು ಕಡಿದು ನಂದನವನವನ್ನು ಮಾಡುವಂತೆ, ಮಾನವ ಜನಾಂಗದಲ್ಲಿರುವ ಅಸಮಾನತೆ, ದಾರಿದ್ರ್ಯ, ಪಾರತಂತ್ರ್ಯಗಳನ್ನು ನಾಶ ಮಾಡಿ ಸ್ವಾತಂತ್ರ್ಯ, ಸುಖ, ಸಮಾಧಾನಗಳನ್ನುಂಟುಮಾಡಿ, **ಭೂಲೋಕವನ್ನು ಸ್ವರ್ಗಲೋಕ ಮಾಡುವದೇ ಸಾಮ್ಯವಾದದ ಮುಖ್ಯ ಗುರಿಯು. ಇದೇ ಸಾಮ್ಯವಾದದ ಸಿದ್ಧಾಂತ.** ಇದನ್ನು ಬಿಡಿಸುವದೇ **ಸಾಮ್ಯವಾದ.**

ಇದಕ್ಕೆ ಹೊಂದಿ ಅನೇಕ ಸಾಮ್ಯವಾದದ ಉಪಸಿದ್ಧಾಂತಗಳು ಹೊರಡುತ್ತವೆ. ಆದರೆ ಅವುಗಳ ಗುರಿಯು ಮಾತ್ರ ಮೇಲಿನ ಸಿದ್ಧಾಂತವನ್ನು ಸಾಧಿಸುವದಕ್ಕಾಗಿ.

ಮೇಲಿನ ಸಿದ್ಧಾಂತವನ್ನು ಸೂಕ್ಷ್ಮ ದೃಷ್ಟಿಯಿಂದ ಅವಲೋಕಿಸಿದರೆ, ಅದರಲ್ಲಿ ಮೂರು ನಾಲ್ಕು ತತ್ವಗಳು ಅಡಕವಾದದ್ದು ಸ್ಪಷ್ಟವಾಗಿ ಕಂಡು ಬರುವದು.

ವ್ಯಕ್ತಿ ಒಡೆತನವನ್ನು ನಷ್ಟಮಾಡಿ, ಧನೋತ್ಪಾದನೆಯ ಸಾಧನಗಳ ಮೇಲೆ, ರಾಷ್ಟ್ರವು ತನ್ನ ಸ್ವಾಮಿತ್ವವನ್ನು ಇಟ್ಟುಕೊಂಡು ಇಡೀ ಜನಾಂಗವೇ ಅಂದರೆ ಖಣಿಗಳ, ಕಾರಖಾನೆಗಳ, ಬ್ಯಾಂಕುಗಳ, ವಿಮಾ ಕಂಪನಿಗಳ, ವ್ಯಾಪಾರ ಉದ್ಯೋಗಗಳ ಒಡೆತನವೆಲ್ಲವೂ ರಾಷ್ಟ್ರದ್ದು. ಅದೇ ರೀತಿಯಾಗಿ ಇಡೀ ರಾಷ್ಟ್ರದಲ್ಲಿರುವ ಜನರೆಲ್ಲರೂ ಒಂದಿಲ್ಲೊಂದು ಉದ್ಯೋಗವನ್ನು ಕೈಕೊಳ್ಳುವರು. ಅಂದರೆ ಯಾರೂ ದುಡಿಯದೆ ಶ್ರಮಜೀವಿಗಳಾಗದೆ ಉಳಿಯಲು ಮಾರ್ಗವಿಲ್ಲ. ಇದರಿಂದ ರಾಷ್ಟ್ರವೇ

ಧನೋತ್ಪಾದನೆ ಮಾಡಿದಂತಾಗಿ ಆ ಧನವು, ಆ ಸಂಪತ್ತು ಅರ್ಥಾತ್ ರಾಷ್ಟ್ರವೇ ಮಾನವ ಜನಾಂಗವಾಗುವದು. **ಈ ಉದ್ಯೋಗ ವ್ಯವಸಾಯಗಳ ಹಾಗೂ ಧನೋತ್ಪಾದನೆಯ ಸಾಧನಗಳ ರಾಷ್ಟ್ರೀಕರಣವೇ ಮೊದಲನೆಯ ತತ್ವವು.**

ವ್ಯಕ್ತಿಬಡತನದಿಂದುಂಟಾದ ಇವರು ಶ್ರೀಮಂತರು, ಇವರು ಬಡವರು, ಇವರು ದೊಡ್ಡ ಮನೆತನದವರು, ಇವರು ಕೀಳು ಜಾತಿಯವರು, ಇವರು ಕೂಲಿಯವರು, ಅಸ್ಪೃಶ್ಯರು, ಇವರು ಸೇವಕರು ಎಂಬ ವರ್ಣಭೇದವನ್ನು ಕಿತ್ತೊಗೆದು ಎಲ್ಲರೂ ಮಾನವರು, ಎಲ್ಲರೂ ಬಂಧುಗಳು, ಮಾನವನ ಜೀವಣಿಗೆಗೆ ಬೇಕಾಗುವ ಸಾಧನೆಗಳ ಮೇಲೆ ಎಲ್ಲರಿಗೂ ಸಮಾನ ಅಧಿಕಾರವಿದೆ, ಎಂಬ **ಉದಾತ್ತ ತತ್ವಗಳ ಮೇಲೆ ಸಮಾಜದ ಪುನರ್ರಚನೆಯನ್ನು ಮಾಡುವದೇ ಎರಡನೆಯ ತತ್ವವು.**

ಇಷ್ಟೆಲ್ಲ ಪ್ರಯತ್ನಗಳು ಏತಕ್ಕಾಗಿ ? ರಾಷ್ಟ್ರದ ಜನಾಂಗಕ್ಕೆಲ್ಲ ಸುಖವಾಗಬೇಕೆಂದಲ್ಲವೇ ? ಅಂದಮೇಲೆ ರಾಷ್ಟ್ರದ ಧನೋತ್ಪಾದನೆಯೂ ರಾಷ್ಟ್ರದ ಹಿತಕ್ಕಾಗಿಯೇ ಎಂದಂತಾಯಿತು. ಸಾಮ್ಯವಾದದ ಅರ್ಥಶಾಸ್ತ್ರದ ಮೂಲ ಸಿದ್ಧಾಂತವೂ ಇದೆ. ಅರ್ಥವನ್ನು ಹುಟ್ಟಿಸುವದೆಲ್ಲ, ಜನಾಂಗದ ಹಿತಕ್ಕಾಗಿ. ಹಾಗಾದರೆ ಧನೋತ್ಪಾದನೆಯು ಯಾವಾಗ ಹಿತವೆನಿಸುವದು? ಅದರ ಸುಖವು ಮಾನವನಿಗೆ ದೊರೆತಾಗ. ಅಂದರೆ ರಾಷ್ಟ್ರದ ಉತ್ಪನ್ನವು ಸಮಾಜದ ಎಲ್ಲ ವ್ಯಕ್ತಿಗಳಿಗೆ ಅವರ ಕಲ್ಯಾಣವಾಗುವ ರೀತಿಯಲ್ಲಿ ವಿತರಣ (Distribution) ವಾದಾಗ ಮಾತ್ರ. ಆದ್ದರಿಂದ ರಾಷ್ಟ್ರದ ಸಂಪತ್ತಿಯ ವಿತರಣವು ಸಾಮ್ಯವಾದದಲ್ಲಿ ಮಹತ್ವದ ಸ್ಥಾನವನ್ನು ಪಡೆದಿರುವದು. ಈ ರೀತಿಯಾಗಿ **ರಾಷ್ಟ್ರದ ಸಂಪತ್ತನ್ನು ಜನಾಂಗದ ಹಿತದ ದೃಷ್ಟಿಯಿಂದ ವಿತರಣಮಾಡುವದೇ ಮೂರನೇ ತತ್ವವು.**

ಈ ಎಲ್ಲ ಮಾತುಗಳು ಕೈಗೂಡಬೇಕಾದರೆ, ರಾಜ್ಯಸೂತ್ರಗಳು ಕೈಯಲ್ಲಿ ಬೇಕು. ಪರತಂತ್ರರಾಷ್ಟ್ರಗಳು ಏನನ್ನೂ ಮಾಡಲಾರವು.

ರಾಷ್ಟ್ರಗಳ ಪಾರತಂತ್ರ್ಯಕ್ಕೆ ಈ ಬಂಡವಲವಾದವೇ ಮೂಲವೆಂಬು ದನ್ನು ನಾವು ಹಿಂದೆಯೇ ವಿವರಿಸಿದ್ದೇವೆ. ಆದ್ದರಿಂದಲೇ ಸಾಮ್ಯ ವಾದವು ಸಾಮ್ರಾಜ್ಯವಾದದ ಕಡು ಹಗೆಯು. ಅದನ್ನು ನಾಶಮಾಡುವ ಸಂಕಲ್ಪದೊಡನೆಯೇ ಸಾಮ್ಯವಾದದ ಜನ್ಮವು. ಪಂ. ಜವಾಹರ ಲಾಲರು ಸಾಮ್ರಾಜ್ಯವಾದದ ಶತ್ರುಗಳೇಕೆ? ಎಂಬುದರ ಅರ್ಥವು ಇದ ರಿಂದ ಚನ್ನಾಗಿ ಆಗಬಹುದು. ಇರಲಿ. ಪರತಂತ್ರ ರಾಷ್ಟ್ರಗಳು ಮೊದಲು ಸ್ವಾತಂತ್ರ್ಯವನ್ನು ಪಡೆಯಬೇಕು. ಅಂದರೆ ಅವರಿಗೆ ಸಾಮ್ಯ ವಾದದ ಅನುಷ್ಠಾನಕ್ಕೆ ಅವಕಾಶ. ಆದುದರಿಂದ **ಸಾಮ್ಯವಾದದ ಶ್ರೀಗಣೇಶಾಯನಮಃವೇ ರಾಷ್ಟ್ರೀಯ ಸ್ವಾತಂತ್ರ್ಯ. ಇದೇ ನಾಲ್ಕನೆಯ ತತ್ವವು.**

ಮೇಲೆ ವಿವರಿಸಿದ ಈ ನಾಲ್ಕೂ ತತ್ವಗಳು ಸಾಮ್ಯವಾದದ ಜೀವಾಳ. ಎಲ್ಲ ಸಾಮ್ಯವಾದಿಗಳಿಗೂ ಈ ತತ್ವಗಳು ಮಾನ್ಯವಿವೆ. ಆದರೆ ಈ ತತ್ವಗಳು ಸರ್ವಮಾನ್ಯವಿದ್ದರೂ ಅವುಗಳ ವಿವರಣೆ Details ಗಳಲ್ಲಿಯೂ, ಕಾರ್ಯಕಾರಿಯನ್ನಾಗಿ ಮಾಡುವದರಲ್ಲಿಯೂ, ಮಾನವನ ಸ್ವಭಾವದಂತೆ ಭಿನ್ನಾಭಿಪ್ರಾಯಗಳಾಗುವದು ಸ್ವಾಭಾವಿಕ. ಈ ಅಭಿ ಪ್ರಾಯಗಳು ತೀವ್ರವಾಗಿ ಪಕ್ಷರೂಪಗೊಂಡಿವೆ. ಸಾಮ್ಯವಾದದಲ್ಲಿ Bolsheviks, Constitutional Socialists i. e. (Fabian School Socialists, Guild Socialists) ಇತ್ಯಾದಿಪಕ್ಷಗಳಿವೆ.

ಎಲ್ಲರ ತತ್ವಗಳು ಒಂದೇ. ಕಾರ್ಯಸಾಧನೆಯೂ ಒಂದೇ ಇದ್ದ ಮೇಲೆ, ಭಿನ್ನಾಭಿಪ್ರಾಯಕ್ಕೆ ಆಸ್ಪದವೆಲ್ಲಿ? ಎಂದು ಕೇಳಬಹುದು. ತುಸು ಶಾಂತರೀತಿಯಿಂದ ವಿಚಾರಮಾಡಿದರೆ ಮಾನವನ ಸ್ವಭಾವವು ಹೇಗೆ ಭೇದವನ್ನುಂಟುಮಾಡುವದು ಎಂಬುದು ಮನವರಿಕೆಯಾಗುವದು. ನಮ್ಮಲ್ಲಿಯೇ ಸ್ವಾತಂತ್ರ್ಯ ಸಂಪಾದನೆಯ ವಿಷಯಕ್ಕೆ ಎಷ್ಟು ಮತ ಭೇದಗಳಿವೆ? ಕಾಂಗ್ರೆಸ್ಸಿನಲ್ಲಿಯೇ ಎಷ್ಟುಪಕ್ಷಗಳಿವೆ? ಇದೇ ದೃಷ್ಟಿ ಯಿಂದಲೇ ಸಾಮ್ಯವಾದಿಗಳಲ್ಲಿಯೂ ಕೂಡ ತತ್ವವಿವರಣೆಯಲ್ಲಿ ಮತ

ಭೇದಗಳಾಗಿವೆ. ಅದು ಹೇಗೆ ಸ್ವಾಭಾವಿಕವೂ ಪ್ರಾಮಾಣಿಕವೂ ಇರು ತ್ತದೆಂಬುದನ್ನು ನೋಡೋಣ.

ಧನೋತ್ಪಾದನೆಯ ಸಾಧನಗಳ ರಾಷ್ಟ್ರೀಕರಣವನ್ನೇ ತೆಗೆದು ಕೊಳ್ಳೋಣ. ರಾಷ್ಟ್ರೀಕರಣವಾಗಬೇಕೆಂಬ ಮಾತಿನ ಬಗ್ಗೆ ಯಾರದೂ ಮತಭೇದವಿಲ್ಲ. ಆದರೆ ಯಾವ ಯಾವ ಸಾಧನಗಳ ರಾಷ್ಟ್ರೀಕರಣ ವಾಗಬೇಕು ? ಎಲ್ಲವೂ ಆಗಬೇಕೆ, ಬಾರದೆ ? ಎಂಬ ವಿವರಗಳಿಗೆ ಬಂದೊ ಡನೆಯೇ ಕೆಲವರು ' Key Industries ' ಮುಖ್ಯ ಉದ್ಯೋಗಗಳ ರಾಷ್ಟ್ರೀಕರಣವಾದರೆ ತೀರಿತು. ಚಿಕ್ಕ ಪುಟ್ಟ ಉದ್ಯೋಗಗಳನ್ನು ವ್ಯಕ್ತಿಗಳು ಸ್ವತಂತ್ರವಾಗಿ ಸಾಗಿಸಲಿ, ಎನ್ನುವರು. ಒಮ್ಮೊಮ್ಮೆ ಎಲ್ಲ ಧನೋತ್ಪಾದನೆಯ ಸಾಧನಗಳನ್ನು ರಾಷ್ಟ್ರೀಕರಣ ಮಾಡುವದು ರಾಷ್ಟ್ರದ ದೃಷ್ಟಿಯಿಂದಲೆ ಅಹಿತವಿರುತ್ತದೆ. ಉದಾಹರಣೆಗಾಗಿ ದೊಡ್ಡ ದೊಡ್ಡ ಜಮೀನದಾರರ ಭೂಮಿಯ ಮೇಲಿನ ಹಕ್ಕು ನಷ್ಟಪಡಿಸುವದು ಅಗತ್ಯ. ಆದರೆ ಚಿಕ್ಕ ಪುಟ್ಟ ರೈತರ ವಶದಲ್ಲಿದ್ದ ಭೂಮಿಗಳನ್ನು ಉದ್ಯೋ ಗದ ದೃಷ್ಟಿಯಿಂದ ಅವರ ವಶದಲ್ಲಿ ಬಿಡುವದೇ ಯೋಗ್ಯವಾಗುತ್ತದೆ. ಅದ ರಂತೆ ದೊಡ್ಡ ದೊಡ್ಡ ಕಾರಖಾನೆಗಳು ರಾಷ್ಟ್ರೀಕರಣವಾದರೆ ಸಾಕೆನ್ನು ವರು. ಆದರೆ ಉಗ್ರವಾದಿಗಳು ವ್ಯಕ್ತಿ ಒಡೆತನವೇ ಇರತಕ್ಕದ್ದಲ್ಲವೆಂದು ಸಾಧಿಸುವರು. ಕೆಲವರು ಇಂತಿಷ್ಟು, ವ್ಯಕ್ತಿಯ ಒಡೆತನವಲ್ಲಿದ್ದರೆ ಅಡ್ಡಿ ಯಿಲ್ಲವೆನ್ನುವರು. ಸಣ್ಣದಿರಲಿ ದೊಡ್ಡದಿರಲಿ, ರಾಷ್ಟ್ರೀಕರಣವಾದರೇ ರಾಷ್ಟ್ರದ ಬೆಳವಣಿಗೆಯಾಗುವದೆನ್ನುವವರು ಕೆಲವರು. ಹೀಗೆ ಪ್ರತಿ ಯೊಂದು ಮಾತಿನಲ್ಲಿಯೂ ಪಂಗಡಗಳಾಗುವದು ಸ್ವಾಭಾವಿಕವಿದೆ, ಯಾಕಂದರೆ ಮಾನವನ ಸ್ವಭಾವವೇ ಭಿನ್ನ ಭಿನ್ನವಾಗಿರುವದು ಪ್ರಕೃ ತಿಯ ಧರ್ಮ. ಹೀಗೆ ತತ್ವದ ವಿವರಣೆಯಲ್ಲಿ ಮತಭೇದವಾದಂತೆ, ಸಾಮ್ಯವಾದವನ್ನು ಕಾರ್ಯರಂಗಕ್ಕೆ ಇಳಿಸುವದರಲ್ಲಿಯೂ ತೀವ್ರ ಮತ ಭೇದಗಳಿವೆ.

ಸಾಮ್ಯವಾದದ ತತ್ವಕ್ಕನುಸರಿಸಿ ಸಮಾಜದ ರಚನೆಯನ್ನು ಮಾಡ ಬೇಕಾದರೆ, ಕೇವಲ ತತ್ವೋಪದೇಶದಿಂದ ಯಾರೂ ಕೇಳುವದಿಲ್ಲ. ಬಂಡ

ವಲದಾರರ ಚಂಡಾಡದ ಹೊರತು ಶಕ್ಯವೇ ಇಲ್ಲ. ಸಶಸ್ತ್ರ ಕ್ರಾಂತಿಯೇ ಬೇಕು ಎಂದು ಪ್ರತಿಪಾದಿಸುವ ಬೋಲ್ಸೆವಿಕ್‌ರ ಗುಂಪೊಂದೆಡೆಗೆ ಇದೆ.

ಬಹು ಮತದ ಬಲದಿಂದ ಕಾಯಿದೆಗಳನ್ನು ಮಾಡಿ, ಬಂಡವಲದಾರರ ಬಂಡವಲವನ್ನು ಸರಕಾರಕ್ಕೆ ಅರ್ಥಾತ್ ರಾಷ್ಟ್ರಕ್ಕೆ ಸೇರಿಸಿಕೊಳ್ಳಲು ಸಾಧ್ಯವಿದೆ. ಸಶಸ್ತ್ರ ಕ್ರಾಂತಿಯು ಅನಾವಶ್ಯಕ; ಇಷ್ಟೇ ಅಲ್ಲ. ಅದು ಅಪಾಯಕಾರಕವೂ ಅನಿಷ್ಟವೂ ಇದೆ ಎಂದು ಹೇಳುವ Fabian Socialist ಇನ್ನೊಂದು ಕಡೆಗೆ.

ಹೀಗೆ ಭಿನ್ನ ಭಿನ್ನ ರಾಷ್ಟ್ರಗಳ ಪರಿಸ್ಥಿತಿಗನುಸರಿಸಿ, ಅನೇಕ ಮಾರ್ಗಗಳು ಉದಯವಾಗಿವೆ. ಇಲ್ಲಿಯ ವರೆಗೆ ಸಾಮ್ಯವಾದದ ಹುಟ್ಟನ್ನೂ ಅದರ ಸಿದ್ಧಾಂತಗಳನ್ನೂ ವಿವರಿಸಿದ್ದಾಯಿತು. ಈ ವಿಷಯವು ಪೂರ್ಣ ಮನವರಿಕೆಯಾಗಬೇಕಾದರೆ, ರಾಷ್ಟ್ರೀಕರಣ, ಹಾಗೂ, ವಿತರಣಗಳ ಸ್ಪಷ್ಟವಾದ ಕಲ್ಪನೆಯ ಆವಶ್ಯಕತೆಯಿದೆ. ಇವುಗಳನ್ನು ಮುಂದೆ ವಿವರಿಸುತ್ತೇವೆ.



# ರಾಷ್ಟ್ರೀಕರಣ

## ೬

### ೧

ವ್ಯಕ್ತಿ ಒಡೆತನವನ್ನು ಅಳಿದು ಸಂಪತ್ತನ್ನೆಲ್ಲ ರಾಷ್ಟ್ರದ ಸ್ವಾಧೀನಪಡಿಸುವದೇ, ರಾಷ್ಟ್ರೀಕರಣವೆಂದು ಹೇಳುವೆವು. ಈ ಮಾತಿನ ಸ್ಪಷ್ಟತೆಯು ನಮಗೆ ಆಗಬೇಕಾದರೆ, ವ್ಯಕ್ತಿಯ ಆಸ್ತಿಯ ವಿಷಯವಾಗಿ ವಿಚಾರ ಮಾಡುವದು ಅಗತ್ಯವಿದೆ. ವ್ಯಕ್ತಿಯ ಆಸ್ತಿಯೆಂದರೇನು? ಒಬ್ಬನಿಗೆ ಇರಲು ಮನೆ ಇರಬಹುದು. ಒಳ್ಳೇ ಅರಿವೆ ಅಂಚಡಿಗಳು ಇರಬಹುದು. ಪುಸ್ತಕ ಸಂಗ್ರಹಾಲಯವಿರಬಹುದು. ಆದರೆ ಇವೆಲ್ಲವೂ ರಾಷ್ಟ್ರೀಕರಣ ಮಾಡಲು ಯೋಗ್ಯವಾದ ಆಸ್ತಿಯಲ್ಲ. ಯಾಕಂದರೆ, ಇವೆಲ್ಲವೂ ನಿತ್ಯ ಜೀವನಕ್ಕೆ ಅವಶ್ಯವಾದವುಗಳು. ಇವುಗಳಿಂದ ಧನೋತ್ಪಾದನೆಯಾಗುವದಿಲ್ಲ. ಆದರೆ ಅದೇ ಅವನಿಗೆ, ೮-೧೦ ಮನೆಗಳಿದ್ದು, ಆ ಮನೆಗಳಿಂದ ಅವನು ಬಾಡಿಗೆ ಪಡೆಯುತ್ತಿದ್ದರೆ, ಅರಿವೆಯ ಸಂಗ್ರಹವು ವಿಪುಲವಾಗಿದ್ದು, ಅದನ್ನು ಮಾರಿ ಹಣ ಗಳಿಸುತ್ತಿದ್ದರೆ, ಪುಸ್ತಕ ಸಂಗ್ರಹಾಲಯದ ಉಪಯೋಗವನ್ನು ಬಾಡಿಗೆ ರೀತಿಯಿಂದ ಮಾಡುತ್ತಿದ್ದರೆ, ಮಾತ್ರ ಅಂಥ ಮನೆಗಳು, ಅರಿವೆಗಳು, ಪುಸ್ತಕಾಲಯಗಳು ಧನೋತ್ಪಾದನಕ್ಕೆ ಅವನ ಸಾಧನಗಳಾಗುವವು. ಹೀಗೆ ಯಾವದೇ ವಸ್ತುವು ಧನೋತ್ಪಾದನೆಯ ಸಾಧನವಾದರೆ, ಅದೇ ನಿಜವಾದ ಆಸ್ತಿ (Real Property) ಎನಿಸಿಕೊಳ್ಳುವದು. ರಾಷ್ಟ್ರೀಕರಣ ಮಾಡುವದೆಂದರೆ, ಇಂಥ ನಿಜವಾದ ಆಸ್ತಿಯ ಮೇಲೆ ಇದ್ದ ವ್ಯಕ್ತಿಯ ಒಡೆತನವನ್ನು ತಳ್ಳಿ, ರಾಷ್ಟ್ರದ ಒಡೆತನವನ್ನು ಕೂಡಿಸುವದು, ಇದೇ ಸಾಮ್ಯವಾದದ ಬೀಜಮಾತು.

ಆಸ್ತಿ ಹಾಗು ಧನೋತ್ಪಾದನೆಯ ಸಾಧನಗಳು ರಾಷ್ಟ್ರದ ಸೊತ್ತು. ಅದನ್ನು ಯಾರಿಗೂ ಸ್ವಾರ್ಥಕ್ಕಾಗಿ, ಉಪಯೋಗಿಸಲು ಅಧಿಕಾರವಿಲ್ಲ. ರಾಷ್ಟ್ರದ ಒಡೆತನದಲ್ಲಿಯೇ ಎಲ್ಲ ಧನೋತ್ಪಾದನೆಯ ಸಾಧನಗಳಿರಬೇಕೆಂಬುದೇ ಮುಖ್ಯ ತತ್ವವು. ಇದನ್ನು ಕಾರ್ಯರೂಪಕ್ಕಿಳಿಸುವದೇ ರಾಷ್ಟ್ರೀಕರಣ ಮಾಡುವದು.

ಇದರ ಉದ್ದೇಶವೇನು ? ಧನೋತ್ಪಾದನದ ಆಸ್ತಿಯನ್ನೆಲ್ಲ ಕಸಿದುಕೊಂಡ ಮೇಲೆ, ಸುಖವೆಲ್ಲಿ? ಎನ್ನಬಹುದು. ಹಾಗಲ್ಲ, ವ್ಯಕ್ತಿಯ ಆಸ್ತಿಯನ್ನು ಕಸಿದುಕೊಳ್ಳುವದು ಏತಕ್ಕಾಗಿ ವ್ಯಕ್ತಿಗಳಿಗೆ, ಅರ್ಥಾತ್ ಜನಾಂಗಕ್ಕೆ ಉಪಯುಕ್ತ ಒಡವೆಗಳನ್ನು ಪೂರೈಸುವದಕ್ಕಾಗಿ, ಜನರ Personal Property ಬೆಳವಣಿಗೆಯೇ ಇರುತ್ತದೆ. ಇದೇ ರಾಷ್ಟ್ರೀಕರಣದ ಮುಖ್ಯ ಉದ್ದೇಶವು.

ಆದರೆ ಈಗಿದ್ದ ಸಮಾಜದ ಕಾನೂನುಗಳಿಂದ ವ್ಯಕ್ತಿಯು ಬೇಕಾದಷ್ಟು ಧನೋತ್ಪಾದನೆಯ ಸಾಧನಗಳನ್ನು ವಶಪಡಿಸಿಕೊಂಡು ತನಗೆ, ತನ್ನ ಮಕ್ಕಳು ಮರಿಗಳಿಗೆ, ಸಂಗ್ರಹಿಸಿ ಇಡಬಹುದು. ಆದರೆ, ರಾಷ್ಟ್ರೀಕರಣವಾದರೆ, ಈ ಮೋಹದ ಬೇರಿಗೆ ಕೊಡಲಿಯನ್ನು ಇಕ್ಕಿದಂತಾಗಿ, ಕೆಲವೊಂದು ವ್ಯಕ್ತಿಗಳ ಕಿಸೆಯಲ್ಲಿ ಬೀಳುವ ಲಾಭವು ರಾಷ್ಟ್ರದ ಉಡಿಯಲ್ಲಿ ಬಿದ್ದು, ರಾಷ್ಟ್ರದ ಎಲ್ಲ ವ್ಯಕ್ತಿಗಳ ಸುಖ-ಸೌಕರ್ಯಗಳನ್ನು ಹೆಚ್ಚಿಸಲಿಕ್ಕೆ ಅನುಕೂಲವಾಗುವದು. ಹೀಗಾದರೆ (Real Property) ನಿಜವಾದ ಆಸ್ತಿಯು ಇಲ್ಲದಂತಾದರೂ (Personal Property) ಉಪಯುಕ್ತ ಆಸ್ತಿಯು ಬೆಳೆಯುವದರಲ್ಲಿ ಸಂದೇಹವಿಲ್ಲ. ಈ ರೀತಿ ಉಪಯುಕ್ತ ಆಸ್ತಿಯು ಹೆಚ್ಚುವದೆಂದರೇ ಬಡವರ ಬಡತನದ ಉಚ್ಚಾಟನೆ. ದುಃಖದ ಶಮನ.

**ರಾಷ್ಟ್ರೀಕರಣದ ಬೇರೆ ಬೇರೆ ರೀತಿಗಳು—** ರಾಷ್ಟ್ರೀಕರಣವೆಂದರೇನು? ಅದರ ಮುಖ್ಯ ಉದ್ದೇಶವೇನೆಂಬುದನ್ನು ಸ್ಪಷ್ಟಗೊಳಿಸಲಾಯಿತು. ರಾಷ್ಟ್ರೀಕರಣವನ್ನು ಹೇಗೆ ಮಾಡಬೇಕು ಎಂಬುದು ಅತ್ಯಂತ ಮಹತ್ವದ ಮಾತು. ಯಾಕಂದರೆ ಸಾಮ್ಯವಾದವು ಕೇವಲ

ತತ್ತ್ವಜ್ಞಾನವಿರದೆ, ಸಾಮ್ಯವಾದದ ತತ್ತ್ವಗಳನ್ನು ಜೀವನದಲ್ಲಿ ತರುವ ಚಳವಳಿಯಿರುವದರಿಂದ ಮಾರ್ಗವನ್ನು ನಿರ್ಣಯಿಸುವದು ಮಹತ್ತ್ವದ್ದಾಗಿದೆ.

ರಾಷ್ಟ್ರದ ಎಲ್ಲ ವ್ಯಕ್ತಿಗಳ ಹಿತದ ದೃಷ್ಟಿಯಿಂದ ದೇಶದ ಎಲ್ಲ ಭೂಮಿಯು, ಉದ್ಯೋಗ ವ್ಯವಸಾಯಗಳ, ನೌಕರಿಗಳ ರಾಷ್ಟ್ರೀಕರಣವಾಗಬೇಕೆಂದು ಎಲ್ಲರೂ ಒಪ್ಪುವರು. ಯಾವ ಯಾವ ಧನೋತ್ಪಾದನೆಯ ಸಾಧನಗಳನ್ನು ರಾಷ್ಟ್ರೀಕರಣ ಮಾಡಬೇಕೆಂದೊಡನೆಯೇ ಸ್ವಲ್ಪ ತಲೆ ತುರಿಸುವ ಪ್ರಸಂಗ ಬರುವದು.

**ಸ್ಥಾನಿಕ ಸಂಸ್ಥೆಗಳಿಗೆ ಒಪ್ಪಿಸುವದು (Municipalisation)**— ವ್ಯಕ್ತಿ ಒಡೆತನವನ್ನು ನಾಶಮಾಡಿ, ಧನೋತ್ಪಾದನೆಯ ಸಾಧನಗಳನ್ನು ಕೇಂದ್ರ ಸರಕಾರದ ಆಧೀನಕ್ಕೆ ಒಪ್ಪಿಸಬೇಕೆಂದಲ್ಲ. ಅಲ್ಲಲ್ಲಿಯ ಸ್ಥಾನಿಕ ಸಂಸ್ಥೆಗಳಿಗೆ ಒಪ್ಪಿಸಿದರೆ ತೀರಿತು. ಅವರು ಊರಿಗೆ ಸ್ವಚ್ಛತೆ, ನೀರು, ಮೊದಲಾದವುಗಳನ್ನು ಒದಗಿಸುವಂತೆ ಇಡೀ ನಗರದ ಎಲ್ಲ ವ್ಯವಸ್ಥೆಯನ್ನು ಕೈಕೊಂಡರೆ, ಎಲ್ಲ ಜನರಿಗೂ ಸೌಕರ್ಯಗಳುಂಟಾಗುವವೆಂದು ಇವರ ಮತ. ಇದನ್ನು ಕೈಕೊಳ್ಳುವ ನಗರ ಸಭೆಗೆ ಊರಲ್ಲಿಯ ಜನರು ತಮ್ಮ ಆಸ್ತಿಯ ಮೇಲಿನ ಒಡೆತನವನ್ನು ಬಿಟ್ಟುಕೊಡಬೇಕು. ತಾವಾಗಿಯೇ ಬಿಟ್ಟುಕೊಡದಿದ್ದಲ್ಲಿ ಅದನ್ನು ಕಿತ್ತುಕೊಳ್ಳುವ ಅಧಿಕಾರವು ನಗರ ಸಭೆಗೆ ಇರಬೇಕು. ಹೀಗೆ ಅಧಿಕಾರವುಳ್ಳ ಸಂಸ್ಥೆಗಳು ಧನೋತ್ಪಾದನೆಯ ಸಾಧನಗಳನ್ನು ವಶಪಡಿಸಿಕೊಂಡು ಎಲ್ಲ ಜನರ ಹಿತದ ದೃಷ್ಟಿಯಿಂದ ಅವನ್ನು ಹಂಚಿಕೊಡುವ ಹೊಣೆಯನ್ನು ಹೊರಬೇಕು. ಎಂದು ಕೆಲವರ ಮತ.

**ರಾಷ್ಟ್ರೀಕರಣ (Nationalisation)**— ಹೀಗೆ ಸ್ಥಾನಿಕಸಂಸ್ಥೆಗಳ ವಶೆಗೆ, ಧನೋತ್ಪಾದಕ ಸಾಧನಗಳನ್ನು ಕೊಟ್ಟು ರಾಷ್ಟ್ರದ ಹಿತವನ್ನು ಎಲ್ಲ ಬಗೆಯಿಂದ ಸಾಧಿಸಲು ಶಕ್ಯವೊ ಅಶಕ್ಯವೊ ಎಂಬುದು ವಾದುವಾದದ ವಿಷಯ. ಇಡೀ ದೇಶದ ರಕ್ಷಣೆ, ರೇಲ್ವೆ, ಪೋಸ್ಟ, ವಿದೇಶೀಯ ವ್ಯಾಪಾರ ಇತ್ಯಾದಿ ಅನೇಕ ವಿಷಯಗಳಲ್ಲಿ ಇಡೀ ದೇಶದ ಜನರ

ಹಿತಸಂಬಂಧಗಳು ಬೆರೆತಿವೆ. ಆದುದರಿಂದ **ಅಖಂಡ ರಾಷ್ಟ್ರದ** ಸಂಪತ್ತೆಲ್ಲವೂ ರಾಷ್ಟ್ರದ ವಶವಾಗಿ ರಾಷ್ಟ್ರದಿಂದಲೇ ಹಂಚಲ್ಪಡಬೇಕು. ಇಡೀ ದೇಶದ ಭೂಮಿ, ಅರಣ್ಯ, ಖಣಿ, ಕಾರಖಾನೆ, ಮೊದಲಾದವುಗಳೆಲ್ಲ ರಾಷ್ಟ್ರೀಕರಣವಾಗಬೇಕು. ಇಡೀ ರಾಷ್ಟ್ರವೇ ಒಂದು ಕುಟುಂಬ ವೆಂಬ ಧೋರಣದಿಂದ ಅದರ ಆಡಳಿತೆಯು ಸಾಗಿಸಲ್ಪಡಬೇಕು. ಇದೇ ರಾಷ್ಟ್ರೀಕರಣದ ಮಹತ್ವದ ಮಾತು.

ಮೇಲೆ ವಿವರಿಸಿದ ರೀತಿಯಲ್ಲಿ ರಾಷ್ಟ್ರೀಕರಣ ಮಾಡಬೇಕಾದರೆ ಈಗಿದ್ದ ಸಾಮಾಜಿಕ ಜೀವನವೇ ಆಮೂಲಾಗ್ರವಾಗಿ ಬದಲು ಮಾಡ ಬೇಕಾಗುವದು. ಇದು ಸಾಧ್ಯವೇ? ಬಂಡವಲಗಾರರು, ಜಮೀನ ದಾರರು, ಸ್ವಯಂಸ್ಫೂರ್ತಿಯಿಂದ ತಮ್ಮ ಆಸ್ತಿಯ ಮೇಲಿನ ಹಕ್ಕನ್ನು ರಾಷ್ಟ್ರಕ್ಕಾಗಿ ಬಿಡುವದು ಶಕ್ಯವೇ? ಮನುಷ್ಯನ ಸ್ವಭಾವವನ್ನು ಅರಿ ತವರು ಹೀಗೆ ಎಂದೂ ಊಹಿಸಲಾರರು. ಮಾನವನ ಮನವು ಯಾವಾ ಗಲೂ ಸ್ವಾರ್ಥದ ಕಡೆಗೆ. ಇಲ್ಲಿಯ ವರೆಗೆ ಅಧಿಕಾರದಿಂದ ಮೆರೆದ ಇವರು ಪ್ರಜೆಗಳ ಹಿತಕ್ಕಾಗಿ ತ್ಯಾಗಮೂರ್ತಿಗಳಾಗುವರೇ! ಪ್ರಜಾ ಪ್ರಭುತ್ವದ ರಾಜ್ಯದಲ್ಲಿಯೂ ಕೂಡ,ದುಡ್ಡಿನ ಬಲದಿಂದ,ರಾಜ್ಯಾಧಿಕಾರ ವನ್ನು ತಮ್ಮ ಕೈಯಲ್ಲಿಟ್ಟುಕೊಂಡಿರುವರು. ಈ ಪರಿಸ್ಥಿತಿಯಲ್ಲಿ ರಾಷ್ಟ್ರೀ ಕರಣ ಮಾಡಬೇಕಾದರೆ, ಪ್ರಬಲವಾದ ಸಶಸ್ತ್ರಕ್ರಾಂತಿಯು ಹೊರತು ಬೇರೊಂದು ಮಾರ್ಗವೇ ಇಲ್ಲವೆಂದು ಉಗ್ರ ಸಾಮ್ಯವಾದಿಗಳು ವಾದಿಸು ತ್ತಿರುವರು. ಆರ್ಥಿಕ ಅಸಮಾನತೆಯಿಂದ ನೊಂದು ಬಡತನದಿಂದ ಬಳಲಿದ ಹೃದಯದ ಶ್ರಮಜೀವಿಗಳು ರಶಿಯಾದಲ್ಲಿ ಕ್ರಾಂತಿಯನ್ನು ಮಾಡಿಯೇ ತಮ್ಮ ಇಷ್ಟಸಾಧನೆ ಮಾಡಿಕೊಂಡದ್ದರಿಂದ, ಉಗ್ರ ಸಾಮ್ಯವಾದಿ ಗಳಿಗೆ ಈ ಮಾರ್ಗವು ರುಚಿಸಹತ್ತಿದೆ. ಕ್ರಾಂತಿಯೇನೋ ಅವಶ್ಯ. ಆದರೆ ಸಶಸ್ತ್ರ ಕ್ರಾಂತಿಯು ಹಿತಮಾಡಲಾರದೆಂದು ಎಲ್ಲರಿಗೂ ರಶಿಯಾ ದಿಂದ ಮನವರಿಕೆಯಾಗಿದೆ.

ಈ ಕ್ರಾಂತಿಕಾರರನ್ನು ನಿಷೇಧಿಸುವ ಇನ್ನೊಂದು ಸಾಮ್ಯವಾದೀ ಪಕ್ಷವಿದೆ. ಇವರು ಅನ್ನುವದೇನಂದರೆ, ಪಾರ್ಲಮೆಂಟಿನ ಮುಖಾಂತರ

ವಾಗಿಯೋ ಕಟ್ಟಳೆಗಳನ್ನು ಮಾಡಿ, ಆರ್ಥಿಕ ಅಸಮಾನತೆಯನ್ನು ಹೋಗ ಲಾಡಿಸಬಹುದೆಂಬುದೇ ಇವರ ಮತ.

ಬಂಡವಲಗಾರರ ಮೇಲೆ, ಭಾರವಾದ ಕರಗಳನ್ನು ಹೇರಿ, ಅವರ ಆಸ್ತಿಯು ಬೆಳೆಯದಂತೆ ಮಾಡಬೇಕೆಂಬುದೇ ಇವರ ತತ್ವ. ಮುಖ್ಯ ಉದ್ಯೋಗಗಳನ್ನು ರಾಷ್ಟ್ರೀಕರಣ ಮಾಡಬೇಕು. ಅದರ ಒಡೆಯರಿಗೆ ಪ್ರತಿಫಲವನ್ನು ಕೊಡಬೇಕು. ಅದನ್ನು ಬಂಡವಲಗಾರರ ಮೇಲೆ, ಸುಂಕವನ್ನು ಹೇರಬೇಕು. ಅಂದರೆ ರಾಷ್ಟ್ರಕ್ಕೆ ಅದರ ಭಾರವು ಬೀಳುವ ದಿಲ್ಲೆನ್ನುವರು. ಯುದ್ಧಕ್ಕೆ ಮಾಡಿದ ಸಾಲವನ್ನು ತೀರಿಸುವ ಸರಕಾ ರದ ಪದ್ಧತಿಯನ್ನು ಇಲ್ಲಿಯೂ ಅನುಸರಿಸಬೇಕು. ಅಂದರೆ ರಾಷ್ಟ್ರೀಯ ಸಾಲದ ಬಡ್ಡಿಯನ್ನು ರಾಷ್ಟ್ರದಲ್ಲಿಯ ಸಿರಿವಂತರ ಮೇಲೆ ಹೇರಿ ಹೇಗೆ ತೀರಿಸುವರೋ ಹಾಗೆಯೇ ಮಾಡಬೇಕೆಂಬುದೇ ಇದರ ಅರ್ಥ.

ಆದರೆ ಕೆಲವರು ಈ ಪ್ರತಿಫಲವನ್ನು ಕೊಡಲು ಕೂಡ ವಿರುದ್ಧ ಇರುವರು. ಬಂಡವಲಗಾರರ ಕರವೂ ಕೂಡ ಶ್ರಮ ಜೀವಿಗಳ ಲಾಭದ್ದೇ ಇರುವದರಿಂದಲೂ, ಈ ಪದ್ಧತಿಯಿಂದ ಶ್ರೀಮಂತರು ಎಂಬ ವರ್ಗವು ಕೆಲವು ದಿನವಾದರೂ ಬಾಳುವದರಿಂದಲೂ, ಈ ಪದ್ಧತಿಯನ್ನು ತಿರಸ್ಕರಿ ಸುವವರು ಬಹಳ.

ಹೀಗೆ ಸಾವಕಾಶವಾಗಿ, ಉದ್ಯೋಗಗಳನ್ನು ಕ್ರಮೇಣ ರಾಷ್ಟ್ರೀ ಕರಣ ಮಾಡುವದು ಯೋಗ್ಯವೆಂದು ಈ ಪಕ್ಷದವರು ವಾದಿಸುವರು.

ಮೇಲೆ ಹೇಳಿದ ಎರಡು ರೀತಿಗಳು ಇರುತ್ತವೆ. ಆದರೆ (Income Tax, Super Tax, Deathduties) ಇತ್ಯಾದಿ ರೀತಿಗಳಿಂದ ಆಸ್ತಿಯನ್ನು ಸರಕಾರವು ಸೆಳೆದುಕೊಳ್ಳುವದು ಪ್ರಚಾ ರದಲ್ಲಿದ್ದರೂ, ಜನರು ಗೋಳಿಡುವದನ್ನು ನೋಡಿದರೆ ‘Confiscation without Compensation, ಇದುವೇ ಯೋಗ್ಯ ಮಾರ್ಗ! ಎಂದು ಹೇಳುತ್ತಾರೆ. ಆದರೆ ಹೀಗೆ ಟ್ಯಾಕ್ಸಗಳ ಮೂಲಕ Confiscation ಮಾಡಿದ ಹಣವನ್ನು ಕೂಡಲೆ ಬಳಿಕೆಯಲ್ಲಿ ಸರಕಾರವು ತರುವದು. ಇದರಿಂದ ಜನರಲ್ಲಿ ಹಾ ಹಾ ಕಾರವೇಳುವ

ದಿಲ್ಲ. ಹೀಗೆ ಕೂಡಲೇ ಬಳಿಕೆಯಲ್ಲಿ Confiscation ಮಾಡಿದ ಹಣ ವನ್ನು ತರುವಂತಿದ್ದರೆ ಮಾತ್ರ ಸರಕಾರವು Confiscation ಮಾಡಿ ದರೂ ಅಡ್ಡಿಯಿಲ್ಲ. ಹೀಗೆ ಧನೋತ್ಪಾದನೆಯ ಸಾಧನಗಳ ಮೇಲೆ ಸರಕಾರದ ಅಧಿಕಾರವು ಬರುವದು ವ್ಯವಹಾರ್ಯವಾಗಿದೆ. ಪ್ರಜಾ ಪ್ರಭುತ್ವ ರಾಜ್ಯಪದ್ಧತಿಯು ಒಳ್ಳೇ ಸ್ಥಿತಿಗೆ ಮುಟ್ಟಿದ ದೇಶದಲ್ಲಿ ಪ್ರತಿ ವರ್ಷದ ಬಜೆಟಾ ಕಾಲದಲ್ಲಿ ಎಷ್ಟೋ ಕರ ಹೇರಿ ಬಂಡವಲದಾರರ ಹಣ Confiscate ಮಾಡುತ್ತಾರೆ. ಆದರೆ ಇದರಿಂದ ಅಂಥ ಸರಕಾರಗಳು ಸಾಮ್ಯವಾದೀ ಸರಕಾರಗಳೆನ್ನಕೂಡದು. ಸಾಮ್ಯ ವಾದೀ ಸರಕಾರದ ಮುಖ್ಯ ಲಕ್ಷಣವೆಂದರೆ— ಬಂಡವಲದಾರರ ಕೈಯ ಲ್ಲಿಯ ಧನೋತ್ಪಾದನೆಯ ಸಾಧನೆಗಳನ್ನು ಕಸಿದುಕೊಂಡು ರಾಷ್ಟ್ರದ ವತಿಯಿಂದ ಧನೋತ್ಪಾದನೆ ಮಾಡುವದು. ಆದರೆ ಹೀಗೆ ಮಾಡುವ ಉದ್ದೇಶ ಮಾತ್ರ ಆ ಧನೋತ್ಪಾದನೆಯನ್ನು ರಾಷ್ಟ್ರದ ಜನರಲ್ಲಿ ಸರಿ ಯಾಗಿ ಹಂಚುವದೇ ಆಗಿರಬೇಕು. ಹೀಗಿರದಿದ್ದರೆ ಅದು ಸಾಮ್ಯ ವಾದೀ ಸರಕಾರವಾಗದೇ (State Capitalism) ಬಂಡವಲ ವಾದೀ ಸರಕಾರವಾಗಬಹುದು. ಹಾಗಾದರೆ ರಾಷ್ಟ್ರೀಕರಣ ಮಾಡುವ ಉದ್ದೇಶವು, ಈಗಿನ ವೈಯಕ್ತಿಕ ಧನೋತ್ಪಾದನೆಯಲ್ಲಿ ರಾಷ್ಟ್ರದ ಉತ್ಪನ್ನದ ಹಂಚುವಿಕೆಯು ಸರಿಯಾಗಿ ಆಗುವದಿಲ್ಲೆಂಬ ಕಾರಣದಿಂದಲೇ. ಆದ್ದರಿಂದ ಎಲ್ಲ ಧನೋತ್ಪಾದನೆಯ ರಾಷ್ಟ್ರೀಕರಣಮಾಡಿ, ರಾಷ್ಟ್ರದ. ಉತ್ಪನ್ನವನ್ನು ರಾಷ್ಟ್ರದಲ್ಲಿ ಹಂಚಬೇಕು.

ಹೇಗೆ ಹಂಚಿದರೆ ಸಮಾಜದ ಕಲ್ಯಾಣವಾಗುವದು? ಎಂಬುದನ್ನು ಮುಂದಿನ ಪ್ರಕರಣದಲ್ಲಿ ವಿವೇಚಿಸೋಣ.

---

# ವಿತರಣ (Distribution)

೭

●

ಸಮಾಜದ ಕಲ್ಯಾಣವಾಗಬೇಕಾದರೆ, ಧನೋತ್ಪಾದನೆಯು ಸಮಾಜದ (ರಾಷ್ಟ್ರದ) ಹಿತದ ದೃಷ್ಟಿಯಿಂದಲೇ ಸಾಗಬೇಕೆಂಬುದನ್ನು ಹಿಂದೆ ಹೇಳಿದೆವು.

ಸರಕಾರವು ಕೇವಲ ಸಮಾಜೋಪಯುಕ್ತ ಕಾರ್ಯಗಳನ್ನು (ಉತ್ಪಾದನೆಯನ್ನು) ಕೈಕೊಂಡರೆ, ಬಡವರ ಬಡತನವು ಹಿಂಗುವದಿಲ್ಲ. ರಾಷ್ಟ್ರದ ಉತ್ಪನ್ನವು ಬೆಳೆಯಬಹುದು. ಆದರೆ, ಬಡತನವು ಅಳಿಯಬೇಕು, ಅನ್ನ ಅನ್ನವೆಂದು ಬರಿಹೊಟ್ಟೆಯಿಂದ ಕೂಗುವ ಕೋಟ್ಯಾವಧಿ ಜನರಿಗೆ ಅನ್ನವು ದೊರೆಯಬೇಕು, ಶ್ರಮಜೀವನವಿಲ್ಲದೆ ಕೂತುತಿನ್ನುವ ವರ್ಗವು ಮಾಯವಾಗಿ ಇಡೀ ರಾಷ್ಟ್ರವು ಶ್ರಮಜೀವಿಯಾಗಬೇಕು, ಒಳ್ಳೇ ಪ್ರತಿಭಾಸಂಪನ್ನರಾದ ಎಳೆ ಮಕ್ಕಳು ಕೇವಲ ಬಡವರ ಹೊಟ್ಟೆಯಿಂದ ಹುಟ್ಟಿದ್ದಕ್ಕೆ ಅಲ್ಲಿಯೇ ಕಮರಿ ಹೋಗುವ ಕಾಲವು ಬದಲಾಗಿ ಮಾನವನ ಎಲ್ಲ ಶಕ್ತಿಗಳ ವಿಕಾಸವಾಗಿ ರಾಷ್ಟ್ರವು ತೇಜೋಮಯವಾಗಬೇಕು. ಹೀಗಾಗಬೇಕಾದರೆ' (Family system of distribution) ಸರಿಯಾಗಿ ಆಗಬೇಕು. **ರಾಷ್ಟ್ರದ ಕಲ್ಯಾಣವು ರಾಷ್ಟ್ರದ ಧನೋತ್ಪಾದನವು ಎಲ್ಲರಿಗೂ ಸರಿಯಾದ ರೀತಿಯಲ್ಲಿ ಮುಟ್ಟುವದರಲ್ಲಿಯೇ ಇದೆ.** ಇದು ರಾಷ್ಟ್ರೀಕರಣವಾಗಿದ್ದರೆ ಮಾತ್ರ ಶಕ್ಯವೆಂಬುದು ಮೇಲೆಯೇ ಕಾಣುತ್ತದೆ. ಬಂಡವಲವಾದದಿಂದ ಸಾಧ್ಯವಾಗದ ಈ ಕೆಲಸಗಳು ಸಾಧ್ಯವಾಗಬೇಕಾದರೆ, ವ್ಯಕ್ತಿ ಒಡೆತನವು ಅಪ

ರಾಧವೆಂದು ಸಾರಬೇಕಾಗುವದು. ಅಂದರೇ ನಮಗೆ ಎಲ್ಲರಿಗೂ ಸರಿಯಾಗಿ ಹಂಚಲು ಬರುವದು.

ಎಲ್ಲರಿಗೂ ಕಲ್ಯಾಣವಾಗುವಂತೆ ಹಂಚುವ ಬಗೆ ಹೇಗೆ? ಇದರ ಬಗ್ಗೆ ಅನೇಕರು ಅನೇಕ ಬಗೆಯ ರೀತಿಗಳನ್ನು ಸೂಚಿಸುವರು. ರಾಷ್ಟ್ರೀಕರಣದಷ್ಟೇ ಈ ಪ್ರಶ್ನೆಯೂ ಬಹು ಕಠಿಣವಿದೆ.

ಸಾಮ್ಯವಾದಿಗಳು ಅನ್ನುವದೇನಂದರೆ ಆರ್ಥಿಕ ಅಸಮಾನತೆಯಿಂದಲೇ ಬಂಡವಲ ಕೂಡಿತು. ಅದರಿಂದಲೇ ಇಷ್ಟೆಲ್ಲ ಅನಾಹುತಗಳು. ಆದುದರಿಂದ ಅದರ ಬೇರನ್ನೇ ಕಿತ್ತೊಗೆಯಬೇಕು. ಬಂಡವಲಿಗೆ ಆಸ್ಪದವಿಲ್ಲದಂತೆಯೇ ನಾವು ಧನವನ್ನು ಹಂಚಬೇಕು. ಯಾರಿಗೂ ಯಾವ ರೀತಿಯಿಂದಲೂ ಹೆಚ್ಚು ಕಡಿಮೆ ಮಾಡತಕ್ಕದ್ದಲ್ಲ. Equality of income **ಸರಿಸಮಾನವಾಗಿ ಹಂಚಬೇಕು. ಇದೇ ಸಮಾಜದ ತರುಣೋಪಾಯ. ಇದರಲ್ಲಿಯೇ ಸಾಮ್ಯವಾದದ ಶಕ್ತಿಯಿದೆ** ಎಂದು ಪ್ರತಿಪಾದಿಸುವರು.

ಮನುಷ್ಯನು ಒಂದೆಡೆ ನೆಲೆಯೂರಿ ನಿಂತೊಡನೆಯೇ ಅವನ ಸಾಮಾಜಿಕ ಜೀವನವು ಪ್ರಾರಂಭವಾಗುತ್ತದೆ. ಧನದ ವಿತರಣವೂ ನಡೆದು ಬಂದಿದೆ. ಈ ವಿತರಣವು ವಿಭಜನೆಯು ನೊದಮೊದಲು ಮಾನವನ ಕಲ್ಯಾಣವನ್ನು ಮುಂದೆ ಇಟ್ಟುಕೊಂಡೇ ಸಾಗಿತ್ತು. ಸಮಾಜದ ಬೆಳವಣಿಗೆಯೊಡನೆಯೇ ರಾಜಕೀಯ ಬದಲಾವಣೆಯೊಂದಿಗೆಯೇ ಧನದ ವಿಭಜನೆಯೂ, ರೀತಿಗಳೂ ಬದಲಾಗುತ್ತಲೇ ಇವೆ. **ಸಮಾಜದ ಅರ್ಥಾತ್ ಮಾನವಜನಾಂಗದ ಹಿತವಾಗುವಂತೆ ರಾಷ್ಟ್ರದ ಸಂಪತ್ತು ವಿತರಣವಾಗುವದೇ ಮಾನವನ ಪ್ರಗತಿಯ ಕುರುಹು.**

**ಧನೋತ್ಪಾದನೆಯನ್ನು ಯಾರು ಎಷ್ಟು ಮಾಡುವರೋ ಅಷ್ಟು ಅವರಿಗೆ** (To Each what one produces). ಪ್ರತಿಯೊಬ್ಬನಿಗೆ ಅವನು ಶ್ರಮದಿಂದ ಎಷ್ಟು ಧನೋತ್ಪಾದನೆಯನ್ನು ಮಾಡುವನೋ ಅಷ್ಟು ಅವನಿಗೆ ದೊರೆಯಬೇಕೆಂದು ಕೆಲವರು ಅನ್ನುವರು. ಆದರೆ ಇದನ್ನು ಈ ಕಾಲಕ್ಕೆ ಕಾರ್ಯರೂಪಕ್ಕೆ ತರು

ಪಡು ಸಾಧ್ಯವೂ ಇಲ್ಲ. ಶಕ್ಯವೂ ಇಲ್ಲ. ಮಾನವನು ಕಾಡುಸ್ಥಿತಿಯ ಲ್ಲಿದ್ದಾಗ ಈ ಮಾತು ಸರಿಹೋಗುತ್ತಿತ್ತು. ಆಗ ಈ ಪ್ರಶ್ನೆಯೇ ಇರಲಿಲ್ಲ. ಈಗಿನ ನಮ್ಮ ಜೀವನವು ಬಲು ತೊಡಕಿನದಾಗಿದೆ. ಶ್ರಮವಿಭಾಗದ ಅತಿರೇಕವಾದ ಈ ಕಾಲದಲ್ಲಿ ಒಂದು ಕಾರ್ಯದಲ್ಲಿ ಇಂಥವನ ಶ್ರಮವು ಇಷ್ಟೇ ಎಂದು ನಿರ್ಣಯಿಸುವದು ಬಲು ಕಠಿಣ. ಒಬ್ಬ ಒಕ್ಕಲಿಗನ ಜೀವನವನ್ನೇ ತೆಗೆದುಕೊಳ್ಳೋಣ. ಅವನ ಕುಟುಂಬದವರೆಲ್ಲರೂ ಕಲೆತು ಒಕ್ಕಲತನವನ್ನು ಸಾಗಿಸುತ್ತಾರೆ. ಬಂದ ಬೆಳೆಯಲ್ಲಿ ಯಾರಿಗೆ ಎಷ್ಟೆಂಬುದನ್ನು ನಿರ್ಣಯಿಸುವ ಬಗೆ ಹೇಗೆ? ಅದರಂತೆ ನೇಕಾರರ ಮನೆಯನ್ನೇ ತೆಗೆದುಕೊಂಡರೆ, ಕುಟುಂಬದವರೆಲ್ಲರೂ ದುಡಿದದ್ದು ಕಂಡು ಬರುವದು. ಇಲ್ಲಿಯೂ ಇಂಥವನ ದುಡಿತವು ಇಂತಿಷ್ಟು ಎಂದು ನಿರ್ಣಯಿಸಲು ಕಠಿಣವಾಗುವದು. ಈ ಪದ್ಧತಿಯಲ್ಲಿ ಇನ್ನೊಂದು ದೋಷವಿದೆ. ಕೆಲವೊಂದು ಪದಾರ್ಥಗಳಿಗೆ ಮಾನವನ ಶ್ರಮವು ಬೇಕಾಗುತ್ತದೆ. ಆದರೆ ಅವು ಪೂರ್ಣ ಸಿದ್ಧವಾಗುವದಿಲ್ಲ. ಅರ್ಥಶಾಸ್ತ್ರದಲ್ಲಿ ಇವಕ್ಕೆ Services ಎನ್ನುವದುಂಟು. ಇವರ ಗತಿ ಏನು? ಇದು ಪ್ರತ್ಯಕ್ಷ ಧನೋತ್ಪಾದನೆ ಮಾಡುವವರ ಮಾತಾಯಿತು. ಆದರೆ ರಾಷ್ಟ್ರದ ಸಲುವಾಗಿ ವಿವಿಧಕಾರ್ಯಗಳನ್ನು ಕೈಕೊಂಡ ಪೋಲೀಸರು, ಪೋಷ್ಟಮನ್ನರು ವಕೀಲರು, ಡಾಕ್ಟರರು ಅಷ್ಟೇಕೆ ಮನೆಕೆಲಸ ಮಾಡುವ ಮಕ್ಕಳನ್ನಾಡಿಸುವ ಗೃಹಿಣಿಗಳ ಇವರೆಲ್ಲರ ಸೇವೆಯನ್ನು ಅಳೆಯುವ ಬಗೆ ಹೇಗೆ? ಅವರ ಶ್ರಮದಿಂದ ಸಮಾಜವು ಪೋಷಣವಾಗುವದಿಲ್ಲವೆ? ಅಂದ ಮೇಲೆ ಇವರಿಗೆ ಎಷ್ಟೆಷ್ಟು ಹಂಚಬೇಕು? ಈ ಎಲ್ಲ ಮಾತುಗಳನ್ನು ವಿಚಾರ ಮಾಡಹತ್ತಿದರೆ ಮೇಲಿನ ತತ್ವವು ಸಮಾಧಾನವನ್ನುಂಟುಮಾಡುವದಿಲ್ಲ.

ಮೇಲಿನ ತತ್ವದಲ್ಲಿಯ ದೋಷಗಳನ್ನು ಕಂಡು ಕೆಲವರು, '**ಯಾರು ಎಷ್ಟು ವೇಳೆ ದುಡಿಯುವರೋ ಅಷ್ಟು ಅವರಿಗೆ ಸಲ್ಲಬೇಕು.**' ಅಂದರೆ, ಶ್ರಮದ ವೇಳೆಯಂತೆ, ಸಂಪತ್ತನ್ನು ಹಂಚಬೇಕೆಂದು ಇವರ ಮತ. ವಿಚಾರಮಾಡಹತ್ತಿದರೆ, ಈ ತತ್ವವೂ ಸಮಾಧಾನವನ್ನುಂಟುಮಾಡುವದಿಲ್ಲ. ಒಬ್ಬ ಹುಂಬನು ೧೨ ರಿಂದ ೧೮ ತಾಸು ಶ್ರಮ ಮಾಡುವನು. ಆದರೆ, ಒಬ್ಬ ಡಾಕ್ಟರನು ಅರ್ಧಘಂಟೆಯ ವರೆಗೆ, ಅಪರೇಶನದಂಥ ಕೆಲಸ

ವನ್ನು ಕೈಕೊಂಡು, ಅದಕ್ಕಿಂತಲೂ ಮಹತ್ವದ ಕಾರ್ಯವನ್ನು ಮಾಡು ವನು. ಇಲ್ಲಿ ವೇಳೆಯು, ಬೆಲೆಯನ್ನು ನಿರ್ಣಯಿಸಲಾರದು. ಯಾಕಂದರೆ ಡಾಕ್ಟರನ ಈ ಅರ್ಧತಾಸಿನ ಘಳಿಕೆಯಲ್ಲಿ ಅವನು ಜ್ಞಾನಕ್ಕಾಗಿ ವೆಚ್ಚ ಮಾಡಿದ ಧನ ಸಮಯಗಳನ್ನೊಳಗೊಂಡಿರುವದು. ನಾವು ಧನವನ್ನು ಕೊಡುವದಿಲ್ಲೆಂದರೆ, ಪ್ರಾಣಕ್ಕೆ ಎರವಾಗುವ ಪ್ರಸಂಗವಿರಬಹುದು. ಇಂಥ ಸಮಯದಲ್ಲಿ ಪೂರೈಕೆ ಹಾಗು ಬೇಡಿಕೆಗಳ ಪ್ರಮಾಣದಿಂದ ಬೆಲೆ ಕಟ್ಟಬೇಕಾಗುವದು. ಒಬ್ಬ ವ್ಯಭಿಚಾರಿಣಿಯು ೧ ತಾಸಿಗೆ ನೂರು ರೂಪಾಯಿ ಗಳನ್ನು ಘಳಿಸಬಹುದು, ಆದರೆ ಒಬ್ಬ ಪತಿವ್ರತೆಯು ಸಂಜೆಯ ವರೆಗೆ ದುಡಿದರೂ ಒಂದಾಣೆ ದೊರಕಿಸುವದು ಕೂಡ ಕಷ್ಟ.

ಮದುವೆಯಾಗಿ ಗೃಹಿಣಿಯಾದವಳು ಮಕ್ಕಳ ರಕ್ಷಣೆ, ಅಡಿಗೆ, ಇನ್ನಿತರ ಮನೆತನದ ಸಾವಿರಾರು ಕೆಲಸಗಳನ್ನು ಮಾಡುವಳು. ವೇಳೆಯ ಮೇಲಿಂದ ಕೊಡುವದಾದರೆ, ಮಕ್ಕಳಿಲ್ಲದ ಬಂಜೆಯಷ್ಟೇ ಇವಳಿಗೂ ಕೊಡಬೇಕಾಗುವದು. ಆದರೆ ಮಕ್ಕಳಿದ್ದವಳು ಮಕ್ಕಳ ಪಾಲನ ಪೋಷಣೆಯನ್ನು ಮಾಡಬೇಕಾಗುವದಲ್ಲದೆ, ಮಕ್ಕಳಿಗಾಗಿ ಧನವನ್ನೂ ವೆಚ್ಚ ಮಾಡಬೇಕಾಗುವದು. ಈ ಹಣವನ್ನು ಅವಳು ಎಲ್ಲಿಂದ ತರಬೇಕು? **ಮಕ್ಕಳ ಪರಿಪೋಷಣೆಯಾಗುವದು ರಾಷ್ಟ್ರದ ಮಹತ್ವದ ಕೆಲಸ.** ಇದಕ್ಕಾಗಿ ಹಣ ವೆಚ್ಚ ಮಾಡಲೇ ಬೇಕಾಗುವದು. ಆದರೆ ಹಂಚುವಿ ಕೆಯ ಈ ರೀತಿಯಲ್ಲಿ ಇಂಥವರಿಗೆ ಎಡೆಯೇ ಇಲ್ಲ. ಯಾಕಂದರೆ ಎಳೆ ಮಕ್ಕಳು ಧನೋತ್ಪಾದನೆಯನ್ನು ಮಾಡುವದೂಯಿಲ್ಲ ಅದಕ್ಕಾಗಿ ಶ್ರಮ ಬಡುವದೂ ಇಲ್ಲ. ಹೀಗೆ ಅನೇಕ ದೃಷ್ಟಿಯಿಂದ ವಿಚಾರಮಾಡಿ ದರೂ, ಈ ರೀತಿಯನ್ನು ಕಾರ್ಯರಂಗಕ್ಕಿಳಿಸುವದು ರಾಷ್ಟ್ರದ ದೃಷ್ಟಿ ಯಿಂದ ಹಿತಕಾರಿಯಾಗುವದಿಲ್ಲ.

ಇನ್ನೂ ಕೆಲವರು ಹೇಳುವದೇನಂದರೆ, '**ಅವರವರ ಯೋಗ್ಯತೆ ಯಂತೆ ಹಂಚಬೇಕು**'ಎಂದು(To each what one deserves). ಇಲ್ಲಿಯೂ ಯೋಗ್ಯತೆಯೆಂದರೆ ಏನು ಎಂಬುದೇ ಪ್ರಶ್ನೆಯು.

ಬಡತನವು ಯೋಗ್ಯತೆಯನ್ನು ಅವಲಂಬಿಸಿರುತ್ತದೆ. ಪ್ರಾಮಾಣಿಕ

ನಾದವನು ಎಲ್ಲಿ ಹೋದರೂ ಮುಂದೆ ಬರುತ್ತಾನೆ. ಆಲಸಿಯು ಆಸ್ತಿಯನ್ನು ಕಳೆದುಕೊಂಡು ಹಾಳಾಗುತ್ತಾನೆ. ವ್ಯಸನಗಳಿಂದಲೇ ಮನುಷ್ಯನು ಬಡವನಾಗುತ್ತಾನೆ. ಆದ್ದರಿಂದ ಗುಣಯೋಗ್ಯತೆಗಳನ್ನು ನೋಡಿ ಕೊಡಬೇಕೆಂದು ಇವರ ಮತ.

ವಿಚಾರಮಾಡಿ ನೋಡಿದರೆ, ಬಡತನಕ್ಕೂ ದುರ್ವರ್ತನೆಗೂ ಏನೂ ಸಂಬಂಧವಿಲ್ಲ. ಒಬ್ಬ ಶ್ರೀಮಂತನು ಅವಿವೇಕಿಯೂ ಮೂರ್ಖನೂ ವ್ಯಸನಿಯೂ ಇರಬಹುದು. ಅತ್ಯಂತ ದರಿದ್ರನಾದ ಮನುಷ್ಯನು ಸದ್ಗುಣಿಯೂ ಸದಾಚಾರಿಯೂ ಸ್ವದೇಶಾಭಿಮಾನಿಯೂ ಇರಬಹುದು. ಇದು ಇಂದಿನ ಅನುಭವದ ಮಾತು. ಗುಣ ಸ್ವಭಾವಗಳ ಮೇಲಿಂದ ಹಂಚುವದು ಕಠಿಣವಾಗುವದು. ಇದಲ್ಲದೆ, ಈಗಿನ ಕೃತ್ರಿಮ ಜೀವನದ ಪ್ರಪಂಚದಲ್ಲಿ ಇಂಥವನೇ ಸದ್ಗುಣಿಯು ಎಂದು ಹೇಳುವದು ಕೂಡ ಅತ್ಯಂತ ಕಠಿಣವಿರುತ್ತದೆ. ಬಹು ಸಂಖ್ಯಾಕರು ತಾವು ಸದ್ಗುಣಿಗಳು ಎಂದು ತೋರಿಸಿಕೊಳ್ಳಲಿಕ್ಕೆ ಪ್ರಯತ್ನಿಸುವರೇ ಹೊರತು ಆ ರೀತಿಯ ಜೀವನ ಉಳ್ಳವರಾಗಿರುವದಿಲ್ಲ. ಇದಲ್ಲದೆ, ಇಂಥವನು ಕೆಟ್ಟ ಮನುಷ್ಯನಿಗಿಂತ ಎಷ್ಟುಪಟ್ಟು ಒಳ್ಳೆಯವನು ಎಂದು ಹೇಳಲು ಯಾರಿಗೆ ಸಾಧ್ಯ? ಅವನ ಪಾವಿತ್ರ್ಯವನ್ನು ಅಳೆಯುವದೆಂತು? ಅದರ ಅಳತೆಗೋಲು ಯಾವುದು?

ಹೀಗೆ ಒಳ್ಳೆಯವನಿಗೆ, ಹೆಚ್ಚು ಕೆಟ್ಟವನಿಗೆ ಕಡಿಮೆ. ಎಂಬ ರೀತಿಯು ಅಪದ್ಧವೂ ಅವ್ಯವಹಾರ್ಯವೂ ಆಗುವದು

ಇನ್ನೊಂದು ಬಗೆಯನ್ನು ಕೆಲವರು ಸೂಚಿಸುವರು. ಅವರು ಅನ್ನುವದೇನಂದರೆ, **'ಯಾರಲ್ಲಿ ಎಷ್ಟು ತೆಗೆದುಕೊಳ್ಳುವ ಶಕ್ತಿಯಿದೆಯೋ ಅಷ್ಟು ಕೊಡಬೇಕು.'** ಎಂದು. ಈ ಮಾತಿನ ಅರ್ಥವು ಇಷ್ಟೆ! ಬಲವಿದ್ದವನೇ ಬದುಕಬೇಕು. ಆದರೆ ಅಸಮರ್ಥರ ಗತಿಯೇನು?

ವ್ಯಾಪಾರ ಉದ್ಯೋಗಗಳಲ್ಲಿ ವ್ಯಾಪಾರಸ್ಥನ ಯೋಗ್ಯತೆಯ ಮೇಲೆಯೇ ಅವನ ಘಳಿಕೆಯಿರುತ್ತದೆ. ಯಾವನೊಬ್ಬನ ಪರಿಚಯ, ಸವಿಮಾತು, ಗಿರಾಕಿಗಳೊಡನೆ ನಡೆಯುವ ರೀತಿ ಇವೆಲ್ಲವುಗಳ ಮೇಲಿಂದ

ಅವನ ಯೋಗ್ಯತೆಯನ್ನು ಕಟ್ಟಬೇಕು. ಅದರಂತೆಯೇ ಹಂಚಬೇಕೆಂದು ಅವರು ಪ್ರತಿಪಾದಿಸುವರು.

ನಿಜವಾಗಿಯೂ ಈ ತತ್ವವು ಬಹಳ ಪ್ರಬಲವಾದುದಲ್ಲ ಎಂಬುದು ಮಾತ್ರ ಖಚಿತವೇ ಸರಿ. ನೀತಿಗೆ ವಿರುದ್ಧವಾಗಿರುವದು, ತಪ್ಪು ಕಲ್ಪನೆಯ ಮೇಲೆ ನಿಂತಿರುವದು. ಇವರ ಮಾತಿನಂತೆ ನಡೆದರೆ ದೊಡ್ಡ ಕಳ್ಳನಿಗೆ ಬಹಳ ಹಣ ಸಣ್ಣ ಕಳ್ಳನಿಗೆ, ಸ್ವಲ್ಪ ಹಣ ಕೊಡಬೇಕಾದೀತು. ವ್ಯಾಪಾರದ ಉದಾಹರಣೆಯನ್ನೇ ತೆಗೆದುಕೊಂಡರೆ, ಏನು ಕಂಡು ಬರುವದು! ಒಳ್ಳೇ ಜಾಣನಾದ ವ್ಯಾಪಾರಸ್ಥನು, ಏನು ಮಾಡುವನು? ಆದಷ್ಟು ಕಡಿಮೆ ಬೆಲೆಯ ಸರಕನ್ನು ಕೊಟ್ಟು ಆದಷ್ಟು ಹೆಚ್ಚು ಬೆಲೆಯನ್ನು ದೊರಕಿಸಲು ಪ್ರಯತ್ನಿಸುವನು. ವ್ಯಾಪಾರದಲ್ಲಿ ಸತ್ಯಕ್ಕೆ ಸ್ಥಾನವಿಲ್ಲ. ಮುಚ್ಚುಮರೆ, ಮೋಸಗಳು ವ್ಯಾಪಾರದಲ್ಲಿ ಸಾಧುವೆಂದು ಇಂದು ತಿಳಿಯಲ್ಪಡುತ್ತಲಿವೆ. ಇದು ತಾತ್ವಿಕ ದೃಷ್ಟಿಯಿಂದ ಕಳ್ಳತನವಲ್ಲದೆ ಮತ್ತೇನು? ಹೆಚ್ಚು ಹೆಚ್ಚು ಜಾಣನೆಂದರೆ ಹೆಚ್ಚು ಹೆಚ್ಚು ಮೋಸಗಾರನಲ್ಲವೆ? ಇವರ ಮಾತಿನಂತೆ ಯಾವನು ಹೆಚ್ಚು ಮೋಸಗಾರನಿರುವನೋ ಅವನಿಗೇ ಹೆಚ್ಚು ಹಣ. ಯಾರು ಪ್ರಾಮಾಣಿಕರು ಇರುವರೋ ಅವರಿಗೆ ಸ್ವಲ್ಪ ಹಣ ಬಂದಂತಾಗುವದು. ಆದುದರಿಂದ ಈ ತತ್ವವು ವಿಚಾರಕ್ಕೆ ಕೂಡ ಯೋಗ್ಯವಿಲ್ಲ.

ಈ ಮೇಲಿನ ರೀತಿಗಳಿಗಿಂತಲೂ ಒಳ್ಳೆ ರೀತಿಯೆಂದರೇ **ಅವರವರ ಕಾರ್ಯದ ಮೇಲಿಂದ ಭಿನ್ನ ಭಿನ್ನ ವರ್ಗಗಳನ್ನು ಮಾಡಿ, ಅದರಂತೆ ಹಂಚಬೇಕೆನ್ನುವರು.** ಇದನ್ನು ಸ್ವಲ್ಪ ವಿಮರ್ಶೆ ಮಾಡಿದರೆ, ಇದೂ ಜೊಳ್ಳು ಎನಿಸದಿರಲಾರದು.

ಸಮಾಜದ ಭಿನ್ನ ಭಿನ್ನ ಕಾರ್ಯಗಳನ್ನು ಕೈಕೊಂಡ, ಡಾಕ್ಟರರು ಶಿಕ್ಷಕರು, ಮೊದಲಾದವರಿಗೆ, ಆಯಾ ವರ್ಗಗಳಿಗೆ ಒಂದೇ ತರಗತಿಯ ಪಗಾರವನ್ನು ಕೊಡುವರು. ಸದ್ಯಕ್ಕೆ ಈ ಪದ್ಧತಿಯು ಎಲ್ಲ ಕಡೆಗೂ ಇದೆ. ಆದರೆ ಇದರ ಬುಡಕ್ಕೆ ಯಾವ ತತ್ವವೂ ಇಲ್ಲ. ಶಿಕ್ಷಣವೊಂದೇ ವಿಷಯವನ್ನು ತೆಗೆದುಕೊಂಡರೆ, ಪ್ರಾಥಮಿಕ ಶಿಕ್ಷಕನಿಗೆ, ನಾವು ೧೨ ರೂ.ಗಳನ್ನು ಕೊಟ್ಟರೆ, ಅದೇ ಪ್ರೊಫೆಸರನಿಗೆ, ೧೨೦೦ ರೂ.ಗಳನ್ನು

ಕೊಡುತ್ತಲಿದ್ದೇವೆ. ಇಲ್ಲಿ ಅಷ್ಟೇ ಶ್ರಮ, ವೇಳೆಗಳಿಲ್ಲವೆ! ಒಬ್ಬ ನಿರಕ್ಷರಿಯಾದ ಎಂಜಿನ್ ಡ್ರಾಯವ್ಹರನಿಗೆ, ಪದವೀಧರರಿಗಿಂತಲೂ ಹೆಚ್ಚು ಸಂಬಳ ಕೊಡುತ್ತಲಿದ್ದೇವೆ. ಹಂಚುವದು ಬುದ್ಧಿಯನ್ನೇ ಅವಲಂಬಿಸಿದೆಯೆಂದರೆ, ಇಂದು ಉದ್ಯೋಗದಲ್ಲಿರುವ, ಪ್ರೊಫೆಸರರಷ್ಟೇ ಬುದ್ಧಿಯುಳ್ಳ ಕವಿಗಳಿಗೂ, ಗಣಿತಜ್ಞರಿಗೂ, ನೌಕರಿ ಸಿಗದಿದ್ದಲ್ಲಿ ಹೊಟ್ಟೆಗಾಗಿ ಬಳಲ-ಬೇಕಾಗುವದಿಲ್ಲವೆ? ಎಷ್ಟೋ ವರಕವಿಗಳು ಉಪವಾಸ ಸಾಯುತ್ತಲಿದ್ದಾರೆ. ಎಷ್ಟೋ ಬುದ್ಧಿವಂತರೂ, ಸಾಧುಗಳೂ, ತತ್ವಜ್ಞಾನಿಗಳೂ ದುಡ್ಡಿಲ್ಲದೆ ಜೀವಿಸುತ್ತಲಿದ್ದಾರೆ. ಇದರಿಂದ ಬೇರೆ ಬೇರೆ ವರ್ಗಗಳಿಗೆ ಹೆಚ್ಚುಕಡಿಮೆ ಸಂಬಳವೇಕೆ? ಎಂಬುದೇ ಪ್ರಶ್ನೆ.

ಇದಕ್ಕೆ ಕೆಲವರು ಹೀಗೆನ್ನಬಹುದು. ಅವರವರ ಜೀವನದ ತರಗತಿಯು (standard of living) ಹೆಚ್ಚುಕಡಿಮೆಯಿರುವದರಿಂದ ಅವರಿಗೆ ಹೆಚ್ಚುಕಡಿಮೆ ಕೊಡಬೇಕಾಗುವದು. ಆದರೆ ಸುಖಜೀವನವು ಯಾರಿಗೆ ಬೇಡ! ಎಲ್ಲರಿಗೂ ಸಾಮಾನ್ಯವಾಗಿ ಹೊಟ್ಟೆಗೆ ಆಹಾರವು ಅಷ್ಟೇ ಬೇಕಷ್ಟೆ? ಆದರೆ ಒಮ್ಮೊಮ್ಮೆ ವಿಚಾರ ಮಾಡಿದರೆ ಬಡವರ ಹೊಟ್ಟೆಗೇ ಹೆಚ್ಚು ಬೇಕಾಗುವದು. ಹೀಗಿದ್ದು ಗವ್ಹರ್ನರ, ವ್ಹಾಯಿಸರಾಯ, ಮೊದಲಾದವರಿಗೆ ಹೆಚ್ಚು ಸಂಬಳವೇಕೆ? ಇದಕ್ಕೆ ಅವರ ಉತ್ತರವೆಂದರೆ ಅವರ ಜೀವನವು ಕಡಿಮೆ ತರಗತಿಯದಾದರೆ ಅವರ ಅಧಿಕಾರವನ್ನು ಜನರು ಮನ್ನಿಸುವದಿಲ್ಲವೆಂದು. ಈ ಮಾತಿನಲ್ಲಿಯೂ ಅರ್ಥವಿಲ್ಲ. ಒಬ್ಬ ೧೦-೧೨ ರೂಪಾಯಿಯ ಪೋಲೀಸನು ಬೀದಿಯಲ್ಲಿ ಲಕ್ಷಾಧೀಶನ ಕಾರನ್ನು ಕೂಡ ನಿಲ್ಲಿಸಬಹುದು. ಕಾಂಗ್ರೆಸ ಮಂತ್ರಿಮಂಡಳವು ಸ್ವಲ್ಪೇ ವೇತನವನ್ನು ತೆಗೆದುಕೊಳ್ಳುತ್ತಿದ್ದರೂ ಕೂಡ, ಹೆಚ್ಚು ಜನಪ್ರಿಯವಾದದ್ದೇಕೆ? ಅದೇ ಹೆಚ್ಚು ಸಂಬಳ ತಿನ್ನುತ್ತಿರುವ ಅಧಿಕಾರಿಗಳ ದರ್ಪವು ಅಡಗಿರುವದೇಕೆ? ಈ ಮಾತನ್ನು ವಿಚಾರಿಸಿದರೆ, ಈ ತತ್ವದಲ್ಲೇನೂ ಹುರುಳಿಲ್ಲವೆಂದು ಸ್ಪಷ್ಟವಾಗುವದು. ಇಷ್ಟೇ ಅಲ್ಲ, ಇದೂ ಬಂಡವಲವಾದದ ಮರಿಯೆಂದೇ ಹೇಳಬಹುದು. ಯಾಕಂದರೆ ಸಮಾಜದಲ್ಲಿಯ ಆರ್ಥಿಕ ಅಸಮಾನತೆಯನ್ನು ಅಳಿಯದೆ ಉಳಿಸುತ್ತದೆ.

'ಯಾರಿಗೆ ಎಷ್ಟು ಬೇಕೋ ಅಷ್ಟು ತಕ್ಕೊಳ್ಳಲಿ' ಎಂಬುದು ಇನ್ನೊಂದು ಮಾರ್ಗ. ಇದಕ್ಕೆ ನಮ್ಮ ಕುಟುಂಬ ಪದ್ಧತಿಯು ಒಳ್ಳೇ ಉದಾಹರಣೆಯಾಗಿದೆ. ಕುಟುಂಬದಲ್ಲಿಯ ದುಡಿಯುವವರೆಲ್ಲರೂ ತಾವು ದುಡಿದುದನ್ನೆಲ್ಲ ಒಟ್ಟುಗೂಡಿಸಿ, ಇಡೀ ಮನೆತನವನ್ನು ನಡೆಯಿಸುವರು. ಅಂದರೆ ಇದ್ದುದರಲ್ಲಿ ಯಾರಿಗೆ ಎಷ್ಟು ಅವಶ್ಯವಿದೆಯೋ ಅಷ್ಟು ತಕ್ಕೊಳ್ಳುವರು.

ಹೀಗೆ ರಾಷ್ಟ್ರದ ವ್ಯವಸ್ಥೆಯನ್ನು ಮಾಡುವದೇ ಕಮ್ಯೂನಿಝಮ್‌ವು. ಸಂಘವಾದವು. ಈ ಪದ್ಧತಿಯ ಕೆಲವೊಂದು ರೂಪವು ನಮ್ಮ ಮುನಸಿಪಾಲಟಿಯ ಆಡಳಿತೆಯಲ್ಲಿ ಕಂಡುಬರುವದು. ಊರವರೆಲ್ಲರೂ ಪಟ್ಟಿ ಕೊಟ್ಟು ಊರಿಗೆ ಬೇಕಾಗುವ ನೀರು, ದೀಪ ಮೊದಲಾದವುಗಳ ವ್ಯವಸ್ಥೆ ಮಾಡಿಕೊಳ್ಳುವರು. ಅದರಲ್ಲಿ ಕೊಟ್ಟವನಿರಲಿ, ಕೊಡದವನಿರಲಿ, ಎಲ್ಲರಿಗೂ ಅವುಗಳ ಅನುಕೂಲತೆಯಾಗುವದು. ಅಖಂಡ ರಾಷ್ಟ್ರದ ಸಂಪತ್ತನ್ನು ರಾಷ್ಟ್ರೀಕರಣ ಮಾಡಿ, ರಾಷ್ಟ್ರದಲ್ಲಿಯ ಎಲ್ಲ ಜನರಿಗೆ ಅವರವರ ಅಗತ್ಯದಂತೆ ಪೂರೈಸಬೇಕೆಂದೆನ್ನುವರು. ಇದೇ ಕಮ್ಯೂನಿಝಂ. ಈ ಶಬ್ದದ ಉಚ್ಚಾರವಾದೊಡನೆಯೆ ವ್ಯಕ್ತಿಸ್ವಾತಂತ್ರ್ಯವು ನಷ್ಟವಾಗುವದು. ಇಡೀ ರಾಷ್ಟ್ರವೇ ಜೇಲಿನಂತಾಗುವದು. ಎಂಬ ಕೂಗು ಕೇಳಿಸುವದು. ಮಾನವರಲ್ಲಿ ಭಿನ್ನಭಿನ್ನ ರುಚಿಯುಳ್ಳವರಿರುವರು. ಒಬ್ಬನಿಗೆ ಒಂದು ಬೇಕಾದರೆ ಇನ್ನೊಬ್ಬನಿಗೆ ಇನ್ನೊಂದು ಬೇಕಾಗುತ್ತದೆ. ಇದರಿಂದ ಯಾವುದನ್ನು ಎಷ್ಟು ಹುಟ್ಟಿಸಬೇಕೆಂಬ ಪ್ರಶ್ನೆಯೇಳುವದು. ರಾಷ್ಟ್ರಕ್ಕೆ ಉಪಯುಕ್ತವಾದ ಎಲ್ಲ ಒಡವೆಗಳನ್ನು ಹುಟ್ಟಿಸಿದರೆ, ಯಾರಿಗೆಯಾವುದು ಬೇಕೋ ಅದನ್ನು ಅವರು ಪಡೆಯುವರು. ತಮಗೆ ಬೇಡವಾದುದನ್ನು ಕೊಟ್ಟು ಬೇಕಾದುದನ್ನು ತೆಗೆದುಕೊಳ್ಳಬಹುದು. ಈ ನಿಯಮವು ಸುಗಮವಾಗಿ ಸಾಗಲು ಹಣವು ಬೇಕಾಗುವದು.

ಕಮ್ಯೂನಿಝಮವು ಎಲ್ಲರ ಹಿತದ ಪದ್ಧತಿಯಿದ್ದರೂ, ಎಲ್ಲರಿಗೂ ಉಪಯುಕ್ತ ಒಡವೆಗಳನ್ನು ಮಾತ್ರ ಸಾರ್ವಜನಿಕವಾಗಿ ಹುಟ್ಟಿಸಲು ಶಕ್ಯವಿದೆ. ವೈಯಕ್ತಿಕ ಬೇಡಿಕೆಗಳನ್ನು ಪೂರೈಸಲು ಶಕ್ಯವಿಲ್ಲ. ಅದಕ್ಕಾಗಿ

ಹಣವು ಬೇಕೇ ಬೇಕು. ಆದ್ದರಿಂದ ಈ ಪದ್ಧತಿಯು ಸಂಪೂರ್ಣವಾಗಿ ನಮ್ಮ ಪ್ರಶ್ನೆಯನ್ನು ಬಿಡಿಸಲು ಅಸಮರ್ಥವಿದೆ. ಇದಕ್ಕೆ ಸಾಮ್ಯವಾದ ವೊಂದೇ ಉಪಾಯವು. ಧನೋತ್ಪಾದನೆಯ ಸಾಧನೆಗಳೆಲ್ಲ ರಾಷ್ಟ್ರೀಕರಣವಾಗಿ, ರಾಷ್ಟ್ರದ ಸಂಪತ್ತು ಸಮನಾಗಿಯೆ ಎಲ್ಲರಿಗೂ ಹಂಚಲ್ಪಡಬೇಕು. ಇದೇ ಸಾಮ್ಯವಾದದ ಸಿದ್ಧಾಂತ. ಸಾಮ್ಯವಾದದ ಸಿದ್ಧಾಂತಗಳನ್ನು ಹೇಳಿದಂತಾಯಿತು. ಇನ್ನು ಸಾಮ್ಯವಾದಿಗಳ ಕಾರ್ಯಕ್ರಮವನ್ನು ವಿವರವಾಗಿ ವರ್ಣಿಸಿದರೆ, ಈ ಸಿದ್ಧಾಂತಗಳ ಪೂರ್ಣ ಆಕಲನವಾಗುವದು. ಆದುದರಿಂದ ಭಾರತೀಯ ಸಾಮ್ಯವಾದಿಗಳ ಕಾರ್ಯಕ್ರಮವನ್ನೂ ಅದನ್ನು ಜೀವನದಲ್ಲಿಳಿಸುವ ಮಾರ್ಗವನ್ನೂ ಮುಂದಿನ ಪ್ರಕರಣದಲ್ಲಿ ವಿವರಿಸುತ್ತೇವೆ.

---

# ಭಾರತೀಯ ಸಾಮ್ಯವಾದ

●

೧

ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿರುವ ಭಾರತೀಯರ ಅಂತಃಕರಣವನ್ನು ಸಾಮ್ಯವಾದವು ಸೆಳೆಯುವದರಲ್ಲಿ ಆಶ್ಚರ್ಯವಿಲ್ಲ. ಜಗತ್ತಿನಲ್ಲಿಯ ರಾಜ್ಯಕ್ರಾಂತಿಗಳು 'ಕೇವಲ ಪ್ರಜಾಪ್ರಭುತ್ವವು ಬಡತನವನ್ನು ಹಿಂಗಿಸಲು ಸಾಧ್ಯವಿಲ್ಲೆಂ'ದು ಸಾರುತ್ತಿರಲು, ಭಾರತೀಯರು ಅದೇ ತಪ್ಪನ್ನು ಮಾಡುವದು ಸಾಧ್ಯವಿದೆಯೇ? ಭಾರತೀಯರ ಅಂತಃಕರಣವು ಇಂದು ಕ್ರಾಂತಿಯಿಂದ ತುಂಬಿ ತುಳುಕುತ್ತದೆ. ತಮ್ಮ ಭವಿಷ್ಯತ್ತಿನ ವಿಚಾರವಾಗಿ, ಹಲವರು ಹಲವು ಬಗೆಯ ಯೋಜನೆಗಳನ್ನು ಹಾಕುತ್ತಿದ್ದಾರೆ. ತಾವು ನಿರ್ಮಿಸುವ ಸ್ವರಾಜ್ಯವು ಎಂಥದಿರಬೇಕೆಂಬ ಬಗ್ಗೆ ಭಾರತೀಯರಲ್ಲಿಯೂ ಇಬ್ಬಣವಾದದ್ದು ಕಂಡುಬರುತ್ತಲಿದೆ. ಸಾಮ್ಯವಾದವು ತಲೆಯೆತ್ತಿ **ಕಾಂಗ್ರೆಸ ಸೋಶ್ಯಾಲಿಸ್ಟ ಪಾರ್ಟಿ** ಎಂಬ ಹೆಸರಿನಿಂದ ಹೋರಾಡುತ್ತಲಿದೆ. ಭಾರತೀಯ ಅಂತಃಕರಣವು ಯಾವ ದಿಶೆಯಲ್ಲಿ ಹರಿಯುತ್ತಲಿದೆ ಎಂಬುದನ್ನು ಕಾಂಗ್ರೆಸಿನ ಗೊತ್ತುಗುಂಗಳು ಸಾರುತ್ತಲಿವೆ. ರಾಷ್ಟ್ರೀಯ ಮಹಾಸಭೆಯು, ಸ್ವಾತಂತ್ರ್ಯವೇ ತನ್ನ ಗುರಿ ಎಂದು ಸಾರುತ್ತಿದ್ದರೂ ನಮ್ಮವರ ಆರ್ಥಿಕ ಸುಲಿಗೆಯಿಂದಲೂ ಜನಾಂಗವನ್ನು ಮುಕ್ತಮಾಡಲು ಬಯಸುತ್ತಿದೆ.

೧೯೩೧ನೇ ಇಸ್ವಿಯ ಅ. ಭಾ. ಕಾಂಗ್ರೆಸ ಕಮಿಟಿಯು ಕೆಳಗಿನ ಗೊತ್ತುವಳಿಯನ್ನು ಸ್ವೀಕರಿಸಿದೆ.

**" ಭಾರತೀಯರ ದಾರುಣವಾದ ದುಃಖ ದಾರಿದ್ರ್ಯಗಳಿಗೆ ವಿದೇಶಿಯರ ಸುಲಿಗೆಯೊಂದೇ ಅಲ್ಲದೆ ಸಮಾಜದ ಆರ್ಥಿಕ ಘಟನೆಯೂ ಕಾರಣವಾಗಿದೆ. ತಮ್ಮ ಸುಲಿಗೆಯು ತಡೆಯಿಲ್ಲದೆ ನಡೆಯಬೇಕೆಂದು, ಬ್ರಿಟಿಶರು ಈ**

ಆರ್ಥಿಕ ಘಟನೆಯ ಸಮರ್ಥನೆಯನ್ನು ಮಾಡುತ್ತಿದ್ದಾರೆಂದು ಈ ಕಮಿಟಿಯು ಅಭಿಪ್ರಾಯಪಡುತ್ತದೆ. ಈ ದುಃಖ ದಾರಿದ್ರ್ಯಗಳನ್ನು ಪರಿಹರಿಸಿ ಹಿಂದೀ ಜನತೆಯನ್ನು ಸುಧಾರಿಸಬೇಕಾದರೆ, ಭಾರತೀಯ ಜನಾಂಗದ ಸದ್ಯದ ಆರ್ಥಿಕ ಮತ್ತು ಸಾಮಾಜಿಕ ಘಟನೆಯಲ್ಲಿಯೆ ಮೂಲಭೂತವಾದ ಬದಲಾವಣೆಗಳನ್ನು ಮಾಡಿ ಮಹತ್ತರವಾದ ಅಸಮಾನತೆಗಳನ್ನು ನಿರ್ಮೂಲಿಸಬೇಕು. "

ಈ ಗೊತ್ತುವಳಿಯು ಭಾರತದ ಹೃದಯವನ್ನು ಚನ್ನಾಗಿ ಚಿತ್ರಿಸುತ್ತದೆ. ಭಾರತೀಯ ಸಾಮ್ಯವಾದಿಗಳು ಇದೇ ಮಾತನ್ನು ಎತ್ತಿಹಿಡಿದು ಕಾಂಗ್ರೆಸ ಸರಕಾರವೆಂದರೆ, ಸಾಮ್ಯವಾದೀ ಸರಕಾರವೆಂದು ಪ್ರತಿಪಾದಿಸುತ್ತಿರುವರು. ಅದಕ್ಕಾಗಿ ಹೋರಾಡುತ್ತಿರುವರು. ಮೋದ ಪ್ರಕರಣದಲ್ಲಿ ನಾವು ಹೇಳಿದಂತೆ, ಭಾರತೀಯ ಸಾಮ್ಯವಾದಿಗಳ ಕಾರ್ಯಕ್ರಮವನ್ನು ನಾವು ಇಲ್ಲಿ ವಿವರಿಸುತ್ತೇವೆ. ಇವರು ಏನು ಮಾಡಬೇಕೆಂದಿರುವರು ? ಎಂಬುದನ್ನು ಆಲ್ ಇಂಡಿಯಾ ಕಾಂಗ್ರೆಸ ಸೋಶ್ಯಾಲಿಸ್ಟ ಪಾರ್ಟಿಯವರು ತಮ್ಮ ಉದ್ದೇಶ ಪತ್ರಿಕೆಯಲ್ಲಿ ಸ್ಪಷ್ಟವಾಗಿ ಕಾಣಿಸಿದ್ದಾರೆ. ಅವುಗಳನ್ನು ಇಲ್ಲಿ ಕೊಡುತ್ತೇವೆ.

### ಭಾರತೀಯ ಸಾಮ್ಯವಾದಿಗಳ ಉದ್ದೇಶಗಳು

೧ ಎಲ್ಲ ಅಧಿಕಾರವು ಧನೋತ್ಪತ್ತಿಯಲ್ಲಿ ತೊಡಗಿದ ಜನತೆಯ ಕೈಯಲ್ಲಿಯೇ ಇರಬೇಕು.

೨ ದೇಶದ ಆರ್ಥಿಕ ಜೀವನದ ವಿಕಾಸವೆಲ್ಲ ರಾಷ್ಟ್ರದ ನಿಯಂತ್ರಣಕ್ಕೆ ಒಳಪಡಬೇಕು.

೩ ಕಾಲಕ್ರಮದಲ್ಲಿಉತ್ಪತ್ತಿ, ವಿನಿಮಯ, ವಿತರಣಗಳ ಸಾಧನಗಳನ್ನೆಲ್ಲ ಜನಾಂಗದ ಒಡೆತನದಲ್ಲಿರಿಸುವ ಉದ್ದೇಶದಿಂದ ಉಕ್ಕು, ಹತ್ತಿ, ನಾರು, ರೇಶ್ಮೆ, ಹಡಗ, ಖನಿಜಗಳು ಮುಂತಾದ ಪ್ರಮುಖ ಮತ್ತು ಜೀವಾಳದ (Key) ಉದ್ಯಮಗಳೆಲ್ಲವನ್ನೂ ಬ್ಯಾಂಕುಗಳು, ವಿಮಾಸಂಘಗಳು, ಸಾರ್ವಜನಿಕ ಸಂಸ್ಥೆಗಳೇ ಮೊದಲಾದವುಗಳನ್ನೂ ಜನಾಂಗದ ಅರ್ಥಾತ್ ರಾಷ್ಟ್ರದ ಒಡೆತನಕ್ಕೆ ಒಪ್ಪಿಸುವದು.

೪ ವಿದೇಶದ ವ್ಯಾಪಾರವು ರಾಷ್ಟ್ರದ ವಿಶಿಷ್ಟ ಅಧಿಕಾರಕ್ಕೆ ಸೇರಿದುದು.

೫ ಸಾಮ್ಯವಾದದ ಆಡಳಿತಕ್ಕೆ ಇನ್ನೂ ಒಳಪಡದ ದೇಶದ ಅರ್ಥವ್ಯವಸ್ಥೆಯ ಭಾಗದ ಉತ್ಪತ್ತಿ, ವಿತರಣ, ಸಾಲ ಇವುಗಳನ್ನು ಸಹಕಾರದ ಸಂಘಟನೆಯಿಂದ ನಡೆಯಿಸುವದು.

೬ ರಾಜರು, ಜಹಗೀರದಾರರು, ಮತ್ತು ಬೇರೆ ತರದ ಎಲ್ಲ ಸುಲಿಗೆಗಾರರು ಇವರನ್ನೆಲ್ಲ ಪ್ರತಿಫಲ ಕೊಡದೆ ಅವರ ಗದ್ದುಗೆಗಳಿಂದ ತಳ್ಳಿಹಾಕುವದು.

೭ ಹೊಲ ಗದ್ದೆಗಳನ್ನೆಲ್ಲ ಮತ್ತೊಮ್ಮೆ ಒಕ್ಕಲಿಗರಲ್ಲಿ ಹಂಚುವದು.

೮ ಸಹಕಾರದ ಮತ್ತು ಸಾಂಘಿಕವಾದ ಒಕ್ಕಲತನಕ್ಕೆ ರಾಷ್ಟ್ರದ ಸಹಾಯ ಮತ್ತು ಪ್ರೋತ್ಸಾಹ.

೯ ಕೂಲಿಕಾರರ ಮತ್ತು ಒಕ್ಕಲಿಗರ ಸಾಲಗಳನ್ನೆಲ್ಲ ತೀರಿಸುವದು.

೧೦ ಪ್ರತಿಯೊಂದು ವ್ಯಕ್ತಿಗೆ ದುಡಿತವನ್ನು ಕೊಡುವದು, ಅಥವಾ ಉಪಜೀವನಕ್ಕೆ ಸಹಾಯ ಮಾಡುವದು ತನ್ನ ಕರ್ತವ್ಯವೆಂದು ರಾಷ್ಟ್ರವು ತಿಳಿಯುವದು.

೧೧ ಪ್ರತಿಯೊಂದು ವ್ಯಕ್ತಿಯ ಕಾರ್ಯಕ್ಷಮತೆಯಂತೆ ದುಡಿತವನ್ನು ತೆಗೆದುಕೊಂಡು ಅವರವರ ಅಗತ್ಯಗಳಂತೆ ಜೀವನ ಸಾಮುಗ್ರಿಗಳನ್ನು ಒದಗಿಸುವದೇ ಆರ್ಥಿಕ ಸರಕುಗಳ ಉತ್ಪತ್ತಿ ವಿತರಣಗಳನ್ನು ಸಾಗಿಸುವ ಕ್ರಮದ ಮೂಲಾಧಾರವಾಗಬೇಕು.

೧೨ ದುಡಿತದ ತಳಹದಿಯ ಮೇಲೆ, ಪ್ರಾಯಬದ್ಧರಾದವರಿಗೆಲ್ಲ ಮತಾಧಿಕಾರ.

೧೩ ರಾಷ್ಟ್ರವು ಧಾರ್ಮಿಕ ಮತಮತಗಳಲ್ಲಿ ಪಕ್ಷಪಾತವನ್ನು ಮಾಡುವದಾಗಲೀ ವಿಶಿಷ್ಟವಾದ ಒಂದು ಮತಕ್ಕೆ ಬೆಂಬಲವನ್ನು ಕೊಡುವದಾಗಲೀ ಸಲ್ಲದು. ಜಾತಿವರ್ಣಗಳಲ್ಲಿ ಕೀಳು ಮೇಲೆಂಬ ಭೇದವನ್ನೂ ಮಾಡಕೂಡದು.

೧೪ ರಾಷ್ಟ್ರಕ್ಕೆ ಲಿಂಗಭೇದವಿರಕೂಡದು.

೧೫ ಭಾರತದ ಸಾರ್ವಜನಿಕ (ಸರಕಾರದ) ಸಾಲವನ್ನು ಅಲ್ಲಗಳೆಯುವದು.

ಹೀಗೆ ಮೇಲ್ಕಂಡ ೧೫ ಯೋಜನೆಗಳನ್ನು ಭಾರತೀಯ ಸಾಮ್ಯವಾದಿಗಳು ಮುಂದಿಟ್ಟುಕೊಂಡಿದ್ದಾರೆ.

ಮೇಲಿನ ಉದ್ದೇಶಗಳ ವಿವರಣೆಯನ್ನು **ಶ್ರೀ. ಜಯಪ್ರಕಾಶ ನರೇಣರು** "ಸಾಮ್ಯವಾದವೇ ಏಕೆ?" ಎಂಬ ಪುಸ್ತಕದಲ್ಲಿ ಕೆಳಗಿನಂತೆ ವಿವರಿಸಿದ್ದಾರೆ.

ಈ ಯೋಜನೆಗಳು ಸಕೃದ್ದರ್ಶನಕ್ಕೆ ಒಳ್ಳೇ ಕ್ರಾಂತಿಕಾರಕ ಕಾಣುತ್ತವೆ. ಈಗಿನ ಸಮಾಜವನ್ನು ಬುಡಮೇಲು ಮಾಡುವಂತಹವುಗಳಾಗಿವೆ. ನಿಜವಾಗಿ ನೋಡಿದರೆ, ಇವು ಅತ್ಯಂತ ಸರಳ ಹಾಗು ವಿವೇಕಯುಕ್ತವಾಗಿಯೂ ನ್ಯಾಯವಾಗಿಯೂ ವ್ಯವಹಾರ್ಯವಾಗಿಯೂ ಇವೆ. ವ್ಯಕ್ತಿ ಒಡೆತನವನ್ನು ನಾಶಮಾಡುವ ಸರಳವಾದ ತತ್ವಸಿದ್ಧಿಗಾಗಿಯೇ ಇವೆಲ್ಲ ಯೋಜನೆಗಳನ್ನು ಕಲ್ಪಿಸಲಾಗಿದೆ. ಸಾಮ್ಯವಾದದ ಆರ್ಥಿಕ ಯೋಜನೆಯನ್ನು ಪ್ರಸ್ಥಾಪಿಸುವದೂ ಇವುಗಳ ಉದ್ದೇಶವಾಗಿದೆ.

**೧. ರಾಜ್ಯಾಧಿಕಾರವು ಧನೋತ್ಪಾದನೆಗಾಗಿ ದುಡಿಯುವವರ ಕೈಯಲ್ಲಿ**—ಶ್ರಮಜೀವಿಗಳಾಗಿ ಧನೋತ್ಪಾದನೆಯನ್ನು ಮಾಡುವವರಿಗೆ ರಾಜಕೀಯ ಮತ್ತು ಆರ್ಥಿಕ ಅಧಿಕಾರ ದೊರೆಯಬೇಕೆಂಬುದೇ ಈ ಯೋಜನೆಯ ಮುಖ್ಯ ಗುರಿಯು. ಸರಕುಗಳನ್ನು ಹುಟ್ಟಿಸುವವರೂ ಅದಕ್ಕಾಗಿ ತಮ್ಮ ಮೈ-ಮನಗಳನ್ನು ದುಡಿಸುವವರೂ ಇವರಲ್ಲಿ ಬರುವರು. ಶ್ರಮಜೀವಿಗಳಿಗೇ ರಾಷ್ಟ್ರದ ಅಧಿಕಾರವು ಹೋಗುವದೆಂದ ಬಳಿಕ ದುಡಿಯದಿದ್ದವರಿಗೆ ಅಧಿಕಾರವಿಲ್ಲೆಂಬುದು ಮೇಲೆಯೇ ಕಾಣುವದು.

ಇದರಲ್ಲಿ ಒಂದು ತತ್ವವು ಅಡಕವಾಗಿದೆ. ಇಲ್ಲಿಯ ವರೆಗಿನ ಯಾವದೇ ರಾಜ್ಯಪದ್ಧತಿಯಲ್ಲಿ ಸಮಾಜದ ಸಂಘಟನೆಯಲ್ಲಿ ರಾಜ್ಯಾಧಿಕಾರವು ರಾಷ್ಟ್ರದಲ್ಲಿ ಅಧಿಕ ಸಂಖ್ಯಾಕರಾಗಿರುವ ದುಡಿಯುವ ವರ್ಗದವರ ಕೈಯಲ್ಲಿರದೆ, ಬಂಡವಲಗಾರರ ಹಸ್ತಕರ ಕೈಯಲ್ಲಿಯೇ ಇರುತ್ತಿರುವದು. ಸಮಾಜದ ರಚನೆಯೇ ಹೀಗಾಗಿ ಕುಳಿತಿದೆ. ಪ್ರಜಾಪ್ರಭುತ್ವದ ಯುಗವು ಪ್ರಾರಂಭವಾಗುವದಕ್ಕಿಂತ ಮೊದಲಿಗಂತೂ, ರಾಷ್ಟ್ರವು ಹೇಳಿಕೇಳಿ ಆಳುವ ವರ್ಗದವರ ಕೈಯಲ್ಲಿತ್ತು. ಅವರು ಬಂಡವಲಗಾರರ ದಬ್ಬಾಳಿಕೆಯನ್ನು ಪೋಷಿಸುವವರು. ಗ್ರೀಸ ದೇಶದ ಪ್ರಜಾಸತ್ತಾತ್ಮಕ ರಾಜ್ಯದಲ್ಲಿ ಕೂಡ ಇದೇ ಪದ್ಧತಿಯೇ ಇದ್ದಿತು.

ಆದರೆ ಮತದಾನದ ಅಧಿಕಾರವು ವಿಸ್ತರಿಸಲ್ಪಟ್ಟು, ಪಕ್ಷಪ್ರಧಾನವಾದ ರಾಜಕಾರಣವು ಉದಯವಾದೊಡನೆಯೇ ಪ್ರಜಾಪ್ರಭುತ್ವವು

ತಲೆಯೆತ್ತಿತು. ಮತಾಧಿಕಾರವು ಬಂದೊಡನೆಯೇ ಬಡತನವು ಹಿಂಗುವ ದೆಂದು ಬಡವರು ಹಿಗ್ಗಿದ್ದರು. ಆದರೆ, ರಾಜ್ಯಪದ್ಧತಿಯು ಸಿರಿವಂತರಿಗೆ ಅನುಕೂಲವಿದ್ದುದರಿಂದ ಪ್ರಜಾಪ್ರಭುತ್ವವು ನಗೆಗೇಡಾಯಿತು. ಸಿರಿ ವಂತರು ತಮ್ಮ ಧನಬಲದಿಂದ ರಾಜ್ಯಸೂತ್ರಗಳನ್ನು ಕೈಯಲ್ಲಿ ತೆಗೆದು ಕೊಳ್ಳುವರು. ಪತ್ರಿಕೆಗಳು ಇವರ ಪ್ರಚಾರಕ್ಕಾಗಿ ಸಿದ್ಧವಾಗಿವೆ. ಇವರನ್ನೇ ಶಿಕ್ಷಣಕ್ಕಾಗಿ ಶಾಲೆ ಕಾಲೇಜುಗಳು ಕರೆಯುತ್ತಲಿವೆ. ಆದರೆ ಬಡವರನ್ನು ಕೇಳುವವರಾರು? ಹೊಟ್ಟೆಗೆ ಅನ್ನವಿಲ್ಲದವರು ಶಿಕ್ಷಣಕ್ಕಾಗಿ ಹಣವೆಲ್ಲಿಂದ ತರಬೇಕು? ಪತ್ರಿಕೆಗಳೆಲ್ಲಿಂದ ಬರಬೇಕು? ಚುನಾವಣೆಯಲ್ಲಿ ಹೇಗೆ ಜಯಿಸಬೇಕು? ಇಂಥ ಪರಿಸ್ಥಿತಿಯಲ್ಲಿ ಮತಾಧಿಕಾರದ ಮಹ ತ್ವವು ಮಾಯವಾಗುವದರಲ್ಲಿ ಆಶ್ಚರ್ಯವಿಲ್ಲ.

ಬಡವರು ಬಲ್ಲಿದರಾಗಿ, ಎಷ್ಟೇ ತೊಂದರೆಗಳಿದ್ದರೂ ತಮ್ಮ ಮತ ಗಳಿಂದ ರಾಷ್ಟ್ರದ ಆರ್ಥಿಕ ವ್ಯವಸ್ಥೆಯನ್ನು ತಮಗೆ ಅನುಕೂಲವಾಗು ವಂತೆ ಮಾಡಿಕೊಳ್ಳುವರೆಂದು ಕಂಡುಬಂದೊಡನೆಯೇ ಪ್ರಜಾಪ್ರಭುತ್ವದ ಸೂತ್ರಚಾಲಕರು, ಪ್ರಜೆಗಳ ಮತದಾನದ ಅಧಿಕಾರವನ್ನೇ ಸೆಳೆದುಕೊಳ್ಳು ವದು ಅನೇಕ ರಾಷ್ಟ್ರಗಳಲ್ಲಿ ಕಂಡುಬರುತ್ತಲಿದೆ. ಪಕ್ಷಪ್ರಧಾನವಾದ ಸರಕಾರವು ಮಾಯವಾಗಿ, **ಫ್ಯಾಸಿಝಮ್‌**ವು ರಾಜ್ಯಸೂತ್ರಗಳನ್ನು ವಹಿಸುವದು. ಮರಳಿ ಬಂಡವಲಗಾರರ ಅನುಕೂಲವಾಗುವಂತೆ, ಆರ್ಥಿಕ ಘಟನೆಯನ್ನು ಸರಿಪಡಿಸುವದು. ಇದು ಇಂದಿನ ಜೀವನ.

ಈ ಅನುಭವವನ್ನು ಕಣ್ಣಾರೆ ಕಾಣುತ್ತಿರುವ ನಾವು "ಅಧಿಕಾರ ವೆಲ್ಲ ದುಡಿಯುವವರಿಗೆ" ಎಂದು ಬುದ್ಧಿಪೂರ್ವಕವಾಗಿ ಸಾರುತ್ತಲಿ ದ್ದೇವೆ. **ಆರ್ಥಿಕ ಬಲವೇ ಅಧಿಕಾರದ ಮೂಲ**ವೆಂದು ನಮಗೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಅದ್ದರಿಂದ ಮೇಲಿನ ಸಿದ್ಧಾಂತ ವನ್ನು ನಾವು ಜೀವನದಲ್ಲಿ ಇಳಿಸಲು ಹವಣಿಸುತ್ತಿರುವೆವು. ಧನೋ ತ್ಪಾದನೆಗಾಗಿ ದುಡಿಯುವವರೆಲ್ಲರೂ ಆ ಧನಕ್ಕೆ–ರಾಷ್ಟ್ರದ ಸಂಪತ್ತಿಗೆ ಒಡೆಯರಾಗುವರು. ಇದರಿಂದಲೇ ನಾವು ಬಯಸುವದೆಲ್ಲವೂ ಕೈಗೂಡು ವದು. ಇದೊಂದನ್ನು ಸಾಧಿಸುವದಷ್ಟೇ ನಮ್ಮ ಗುರಿಯಲ್ಲ. ಮಿಕ್ಕ

ಯೋಜನೆಗಳನ್ನು ಪೂರ್ಣವಾಗಿ ಸಿದ್ಧಿಗೊಯ್ಯುವದೇ ನಮ್ಮ ಮಹತ್ವಾಕಾಂಕ್ಷೆ. ಅದಕ್ಕಾಗಿ ನಮ್ಮ ಶಕ್ತಿಸರ್ವಸ್ವವನ್ನೆಲ್ಲ ಸೂರೆಗೈಯುವೆವು.

**೨. ರಾಷ್ಟ್ರದ ಆರ್ಥಿಕ ಜೀವನದ ವಿಕಾಸವೆಲ್ಲ ರಾಷ್ಟ್ರದ ನಿಯಂತ್ರಣ ಯೋಜನೆಗಳಿಗೆ ಒಳಪಡಬೇಕು—** ಇಂದಿನ ನಮ್ಮ ಜೀವನವು ಸ್ವಾರ್ಥಮಯವಾಗಿಯೂ, ವೈಯಕ್ತಿಕವಾಗಿಯೂ ಸಾಗಿದೆ. ಜ್ಞಾನಮಯಕೋಶದಲ್ಲಿ ನಿಂತು ನಾವು 'ಆತ್ಮವತ್ ಸರ್ವಭೂತಾನಿ' ಎಂದು ಹೇಳುತ್ತಿದ್ದರೂ ನಮ್ಮ ಜೀವನವು ಮಾತ್ರ ಸಾಂಘಿಕವಾಗಿರದೆ ತನ್ನ ಉದ್ಧಾರವಾದರೆ ತೀರಿತು ಎಂಬ ಸಂಕುಚಿತವೃತ್ತಿಯುಳ್ಳದ್ದಾಗಿದೆ. ಆದುದರಿಂದಲೇ ಸಾಮ್ಯವಾದವು ಉದಯವಾಗಬೇಕಾಗಿದೆ. ನಾವು ಸಾಂಘಿಕವಾಗಿ ಸಾಮುದಾಯಿಕ ಜೀವನವನ್ನು ನಡಿಸಿಯೇ ಇಲ್ಲ. ಉಚ್ಚತತ್ವಗಳ ಮೇಲೆ, ಬಂಧುಭಾವನೆಯ ಮೇಲೆ, ಸಮಾನತೆಯ ಮೇಲೆ, ಮಾನವನ ಸದ್ಬುದ್ಧಿಗೆ, ಶಕ್ಯವಿದ್ದಷ್ಟು ಬಗೆಯಲ್ಲಿ ಸಾಮಾಜಿಕ ಪ್ರಗತಿಯನ್ನು ಸಾಧಿಸಬೇಕೆಂದು ಸಾಮ್ಯವಾದವು ಹೆಣಗುತ್ತಿರುವದು.

ಸಮಾನ ಉದ್ದೇಶ, ಮತ್ತು ಸಾಂಘಿಕ ಪ್ರಯತ್ನ ಇವುಗಳಲ್ಲಿಯೇ ಮಾನವ ಜನಾಂಗದ ಕಲ್ಯಾಣವಿದೆಯೆಂದು ಸಾಮ್ಯವಾದವು ಕೈಯೆತ್ತಿ ಸಾರುತ್ತಿರುವದು. ಈ ಸಾಂಘಿಕ-ಆರ್ಥಿಕ ಯೋಜನೆಯು ಈಗಿನ ನಮ್ಮ ದುಃಖಮಯವಾದ ಅವ್ಯವಸ್ಥಿತವಾದ ಸಮಾಜದ ವ್ಯವಸ್ಥೆಗಿಂತ ಸಾವಿರಪಟ್ಟು ಮೇಲಾಗುವದರಲ್ಲಿ ಸಂದೇಹವಿಲ್ಲ. ಸಾಮ್ಯವಾದವು ಮಾನವನಲ್ಲಿದ್ದ ಕಾರ್ಯಶಕ್ತಿಗೆ ಪುಟಕೊಟ್ಟು ವೃದ್ಧಿಗೊಳಿಸುವದು. ಸುಷುಪ್ತಾವಸ್ಥೆಯಲ್ಲಿದ್ದ ಶಕ್ತಿಗಳೆಲ್ಲ ಬೆಳಕಿಗೆ ಬರುವವು. ಇದರಿಂದ ಜಂಗುತಿನ್ನುತ್ತ ಬಿದ್ದ ಶಕ್ತಿಗಳೆಲ್ಲ ಕಾರ್ಯೋನ್ಮುಖವಾಗಿ, ಮಾನವನ ಬೆಳವಣಿಗೆಗೆ ಅನುಕೂಲವಾಗುವದು. ಸಾಮ್ಯವಾದವು ಮಾನವನ ಜೀವನಕ್ಕೇ ಒಂದು ಹೊಸ ಬೆಳಕನ್ನು ಕೊಡುವದು. ಭೌತಿಕ ಪ್ರಗತಿಯ ದೃಷ್ಟಿಯಿಂದಲೂ, ಬುದ್ಧಿ ನೀತಿಗಳ ವಿಕಾಸದ ದೃಷ್ಟಿಯಿಂದಲೂ ಇದು ಹೊಸದು. ಇಂದು ನಮ್ಮ ಜೀವನದ ಅಡಿಗಲ್ಲಾದ ಸ್ವಾರ್ಥ, ವೈಯಕ್ತಿಕ ಜೀವನಗಳು ಮಾಯವಾಗಿ, **ತನಗಾಗಿ ತಾನಲ್ಲ. ತಾನು**

**ಎಲ್ಲರಿಗಾಗಿ, ಎಲ್ಲರೂ ಎಲ್ಲರಿಗಾಗಿ,** ಎಂಬ ಉಚ್ಚ ತತ್ವವು ನಮ್ಮ ಜೀವನದ ತಳಹದಿಯಾಗುವದು.

ಇದಕ್ಕೆ ಸಾಮ್ಯವಾದವನ್ನು ಸ್ವೀಕರಿಸಿದ **ರಶಿಯಾ ದೇಶವೇ** ಸಾಕ್ಷಿ. ಅಲ್ಲಿ ತನ್ನದೆಂಬುದಿಲ್ಲ. ಎಲ್ಲವೂ ರಾಷ್ಟ್ರದ್ದು, ರಾಷ್ಟ್ರದ ಪ್ರಜೆಗಳದು. ತಾವು ದುಡಿಯುವದೆಲ್ಲವೂ ರಶಿಯನ್ನರಿಗಾಗಿ ಎಂಬ ನಿಷ್ಠೆಯು ನೆಲೆಯಾಗಿ ನಿಂತಿದೆ. ಅಲ್ಲಿ ಅದ್ಭುತ ಶಕ್ತಿಯು ದೃಗ್ಗೋಚರವಾಗತೊಡಗಿದೆ. ಸೋಲೆಂದರೇನು? ಎಂದು ಜಗತ್ತಿಗೆ ಅವರ ಆವ್ಹಾಹನ. ಇದು ಸ್ವಪ್ನಸೃಷ್ಟಿ ಎನಿಸಬಹುದು. ಇದು ಸಟೆಯಲ್ಲ, ದಿಟ. ಸಮಾಜದ ವಿಕಾಸಕ್ಕೆ ಆರ್ಥಿಕ ಯೋಜನೆಯೇ ಮುಖ್ಯವಾದುದು. **ಯಾವುದೇ ದೇಶದ ಆರ್ಥಿಕ ಸಂಘಟನೆಯಲ್ಲಿಯೇ ಅಲ್ಲಿಯ ಜೀವನದ ಜೀವಾಳವಿರುತ್ತದೆ.** ಆದುದರಿಂದ ರಾಷ್ಟ್ರವು ಆರ್ಥಿಕ ಸಂಘಟನೆಯ ಯೋಜನೆಯನ್ನು ಅಂಕಿತದಲ್ಲಿಟ್ಟುಕೊಂಡು, ಜನತೆಯ ಹಿತಕ್ಕಾಗಿ ಅದನ್ನು ಉಪಯೋಗಿಸುವದು ಅತ್ಯಂತ ಅಗತ್ಯವು.

ಉತ್ಪತ್ತಿ, ವಿತರಣ ಮತ್ತು ಉಳಿತಾಯಗಳನ್ನು ಅಂಕಿತದಲ್ಲಿರಿಸುವದೇ ಆರ್ಥಿಕ ಯೋಜನೆಯ ಮುಖ್ಯ ವಿಚಾರ. ರಾಷ್ಟ್ರವು ಬೇರೆಬೇರೆ ಯೋಜನೆಗಳಲ್ಲಿ ತೊಡಗಿಸಿದ ಹಣವೇ ಉಳಿಕೆಯೆಂದು ತಿಳಿಯಬೇಕು. ದೇಶದ ಅವಶ್ಯಕತೆಯನ್ನು ಲಕ್ಷ್ಯಪೂರ್ವಕವಾಗಿ ವಿಚಾರಮಾಡಿ, ಈ ಮೂರನ್ನೂ ಕ್ರಮೇಣ ಬೆಳೆಯಿಸಬೇಕಾಗುವದು. ಆದರೆ ಸಾಮಾಜಿಕ ಸಂಬಂಧವನ್ನುಳಿದು ವ್ಯಕ್ತಿಗತವಾದ ಆರ್ಥಿಕ ಹಿತಸಂಬಂಧಗಳು ಇರಕೂಡದು. ಇದ್ದರೆ ಇವೆರಡರಲ್ಲಿಯೂ ಘರ್ಷಣೆಯುಂಟಾಗಿ ಕಿಡಿಗಳು ಹಾರದೆ ಹೋಗುವದಿಲ್ಲ.

ರಶಿಯಾದ ಪಂಚವಾರ್ಷಿಕ ಆರ್ಥಿಕ ಯೋಜನೆಯು ಜಗತ್ಪ್ರಸಿದ್ಧವಾಗಿದೆ. ಈ ಯೋಜನೆಯನ್ನು ಕುರಿತು ಗ್ರಿಂಕೋ ಎಂಬುವವನು ಒಂದು ಪ್ರಮಾಣ ಗ್ರಂಥವನ್ನು ಬರೆದಿದ್ದಾನೆ. "ರಾಷ್ಟ್ರಪಲ್ಲಿಯ ಕೆಲ ಬುದ್ಧಿವಂತರು ಒಂದೆಡೆಯಲ್ಲಿ ಕುಳಿತು, ಆರ್ಥಿಕ ಯೋಜನೆ ಮಾಡುವರೆಂದು ತಿಳಿಯುವದು ತೀರ ತಪ್ಪು. ಈ ಯೋಜನೆಯು ಪೂರ್ಣ ಸಿದ್ಧ

ವಾಗಬೇಕಾದರೆ, ರಾಷ್ಟ್ರದಲ್ಲಿ ಸರಕುಗಳನ್ನುಂಟುಮಾಡುವ ಕಾರಖಾನೆ, ಸಾಮೂಹಿಕ ಭೂ-ಕ್ಷೇತ್ರ, ಮತ್ತು ಹಂಚುವ ಪ್ರತಿಯೊಂದು ಘಟಕ ಎಂದರೆ, ಸಹಕಾರದ ಮತ್ತು ರಾಷ್ಟ್ರದ ಉಗ್ರಾಣಗಳು ಭಾಗವಹಿಸಿ ಸಿದ್ಧಪಡಿಸುವರು. ಇದಲ್ಲದೆ ಎಲ್ಲವನ್ನೂ ಎಲ್ಲರ ದೃಷ್ಟಿಯಿಂದ ಸರಿಯಾಗಿ ಆಗುವಂತೆ ವಿಚಾರಣೆ ಮಾಡುವ ಮೇಲ್ವಿಚಾರಕರ ಗುಂಪು ಇರುವದು. ಆರ್ಥಿಕ ಆಡಳಿತೆಯ ಕೇಂದ್ರೀಕರಣವನ್ನು ತಪ್ಪಿಸಬೇಕೆಂದು ರಶಿಯವು ಬಹಳ ಆತುರವಾಗಿದೆ. ಅವರು ಈಗಾಗಲೇ ದೇಶದ ಬೇರೆ ಬೇರೆ ಭಾಗಗಳಲ್ಲಿ ಪ್ರಾದೇಶಿಕ ಘಟಕಗಳನ್ನು ಮಾಡಿ, ಅವುಗಳಿಗೆ ಆಡಳಿತದ ಸ್ವಾತಂತ್ರ್ಯವನ್ನೂ ಕೊಟ್ಟು ತಮಗೆ ಸಮ್ಮತವಾದ ಸರಕುಗಳನ್ನು ತಮಗೆ ಸರಿದೋರುವ ರೀತಿಯಲ್ಲಿ ಸಿದ್ಧಪಡಿಸಲು ಪೂರ್ಣ ಅನುಕೂಲತೆಯನ್ನು ಅವರಿಗೆ ಒದಗಿಸಿಕೊಟ್ಟಿದ್ದಾರೆ.''

ಮೇಲಿನ ವಿವರಣೆಯನ್ನು ನೋಡಿದರೆ, ರಶಿಯದ ಬಗ್ಗೆ ಇದ್ದ ಹುಚ್ಚು ಹುಚ್ಚು ಕಲ್ಪನೆಗಳೆಲ್ಲವೂ ಸುಳ್ಳೆಂದು ಸಿದ್ಧವಾಗುವದು.

ಆರ್ಥಿಕ ಯೋಜನೆಯ ಮೂಲತತ್ವವಿಷ್ಟೆ! ಸಮಾಜಕ್ಕೆ ಅಥವಾ ಸಮುದಾಯಕ್ಕೆ ವಿರುದ್ಧವಾದ ಮತ್ತು ಅದರಿಂದ ಬೇರೆಯಾದ ವೈಯಕ್ತಿಕ ಹಿತಸಂಬಂಧಗಳು ಇರಕೂಡದು.

ಆರ್ಥಿಕ ಯೋಜನೆಗಳನ್ನು ಎಲ್ಲ ರಾಷ್ಟ್ರಗಳು ಕೈಕೊಳ್ಳುವವಲ್ಲ? ನಿಮ್ಮ ವೈಶಿಷ್ಟ್ಯವೇನು ಎಂದು ಕೇಳಬಹುದು. ನಿಜ. ಅಮೇರಿಕಾ, ಇಟಲಿಗಳಂಥ ಬಂಡವಲಗಾರರ ಪ್ರಾಬಲ್ಯವುಳ್ಳ ರಾಷ್ಟ್ರಗಳು ಸಹ ಆರ್ಥಿಕ ಯೋಜನೆಗಳನ್ನು ಕೈಕೊಳ್ಳಹತ್ತಿವೆ. ಆರ್ಥಿಕ ಮುಗ್ಗಟ್ಟು ಕಾಡುತ್ತಿದೆ. ಇದರಿಂದ ಪಾರಾಗಲು ಬಗೆಬಗೆಯ ಯತ್ನಗಳು ನಡೆದವು. ಬಂಡವಲವಾದದಲ್ಲಿಯೇ ದೋಷವಿದೆ ಎಂದು ಬಂಡವಲಗಾರರುಸಹ ಮನಗಂಡಿದ್ದಾರೆ. ಅದರಿಂದಲೇ ಜಗತ್ತು ತಲೆಕೆಳಗಾಗಿದೆ ಎಂದು ಎಲ್ಲರಿಗೂ ಅನುಭವಕ್ಕೆ ಬರುತ್ತಲಿದೆ. ಇದಕ್ಕಾಗಿ **ರೂಸ್‌ವೆಲ್ಟನು** ಕಷ್ಟಪಟ್ಟನು. ಫ್ಯಾಸಿಝಮ್ಮಿನ ಸಂಘಗಳು ಶ್ರಮಬಟ್ಟವು. ಆದರೇನು ? ನಾಯಿಯ ಬಾಲದ ಡೊಂಕು ಸರಿಯಾಗಲಿಲ್ಲ. ಬಂಡವಲ-

ವಾದದ ಯೋಜನೆಗಳೆಲ್ಲ ಮಣ್ಣುಮುಕ್ಕಿವೆ. ಇದರಿಂದ ನಮ್ಮ ಸಿದ್ಧಾಂತವು ಮತ್ತಷ್ಟು ಗಟ್ಟಿಯಾಗಿದೆ. ವ್ಯಕ್ತಿ ಒಡೆತನದ ಹುಟ್ಟಿದಗದ ಹೊರ್ತು ಗತ್ಯಂತರವಿಲ್ಲ. ಎಲ್ಲೆಡೆಯಲ್ಲಿಯೂ ನಿರುದ್ಯೋಗದ ಕೂಗು ಕೇಳಬರುತ್ತಲಿದೆ. ಆದರೆ ರಶಿಯಾದಲ್ಲಿ ಮಾತ್ರ ಕೆಲಸದ ಕೈಗಳು ಸಾಲದಾಗಿವೆ. ಇದರ ಅರ್ಥವೇನು?

ಬಂಡವಲವಾದದ ಯೋಜನೆಗಳೆಲ್ಲ ಬಿದ್ದು ಹೋಗುವದಕ್ಕೂ ಸಾಮ್ಯವಾದಿಗಳ ಯೋಜನೆಗಳೆಲ್ಲ ಯಶಸ್ವಿಯಾಗಲಿಕ್ಕೂ ಅವೆರಡರಲ್ಲಿರುವ ಮಹಾ ವ್ಯತ್ಯಾಸಗಳೇ ಕಾರಣ. ಇಡೀ ಸಮಾಜದ ಹಿತದ ದೃಷ್ಟಿಯಿಂದ ಆರ್ಥಿಕ ವ್ಯವಸ್ಥೆಯನ್ನು ಸರಿಗೊಳಿಸುವದೇ ಸಾಮ್ಯವಾದದ ಗುರಿಯು.

೩. **ಮುಖ್ಯ** (key) **ಉದ್ಯೋಗಗಳ ರಾಷ್ಟ್ರೀಕರಣ (ಸಾಮಾಜೀಕರಣ)** ಇದೇ ಸಾಮ್ಯವಾದದ ತಳಹದಿಯು. ವ್ಯಕ್ತಿ ಒಡೆತನವೇ ಆರ್ಥಿಕ ಸುಲಿಗೆಯ ಮೂಲವು. ಇದನ್ನು ಅಳಿಯುವದೆಂದರೇ ಜನತೆಯ ಆರ್ಥಿಕ ಸ್ವಾತಂತ್ರ್ಯವನ್ನು ಸ್ಥಾಪಿಸುವದು. ಆರ್ಥಿಕ ಯೋಜನೆಯನ್ನು ಕೈಕೊಳ್ಳುವ ಮೊದಲು, ವ್ಯಕ್ತಿಗಳ ಬೇರೂರಿದ ಹಿತಸಂಬಂಧ (vested interests) ಕಿತ್ತೊಗೆಯಬೇಕು. ಧನೋತ್ಪಾದನೆಯ ಸಾಧನ, ವಿನಿಮಯ, ವಿತರಣಗಳು ರಾಷ್ಟ್ರದ ಒಡೆತನದ್ದಾಗಬೇಕೆಂಬುದೇ ಸಾಮ್ಯವಾದದ ಕೊನೆಯ ಗುರಿ. ಇದರ ಅರ್ಥವಿಷ್ಟೆ? ಕಾರಖಾನೆಗಳು, ಕರ್ಮಶಾಲೆಗಳು, ಖನಿಜಪದಾರ್ಥಗಳು, ಕಚ್ಚಾಮಾಲು, ವ್ಯಾಪಾರ, ಬಡ್ಡಿಯ ವ್ಯವಹಾರ ಎಲ್ಲವೂ ಸಮೂಹಿಕ ಅಧಿಕಾರಕ್ಕೆ ಒಳಪಟ್ಟು, ವ್ಯಕ್ತಿ ಒಡೆತನವು ಹೇಳಹೆಸರಿಲ್ಲದಂತಾಗಬೇಕು ಇಂದು ಕಾಂಗ್ರೆಸ ಸಾಮ್ಯವಾದಿ-ಪಕ್ಷವು ಮುಖ್ಯ ಪೇರೆಗಳ ರಾಷ್ಟ್ರೀಕರಣವಾಗಬೇಕೆಂದು, ನಿರ್ಧರಿಸಿದೆ. ಅಂದರೆ, ಹತ್ತಿಗಿರಣಿ, ನಾರಿನಗಿರಣಿ, ಮೊದಲಾದವು ಬಡ್ಡೀವ್ಯವಹಾರ, ಬ್ಯಾಂಕುಗಳು, ವಿಮಾ ಸಂಘಗಳು, ಚಹಾ ಕಾಫಿಯ ತೋಟಗಳು, ರೇಲ್ವೆ ಮೊದಲಾದ ವಾಹನ ವ್ಯವಸ್ಥೆ ಇವುಗಳಲ್ಲದೆ, ಸಾಮುದಾಯ ಜೀವನಕ್ಕೆ ಅವಶ್ಯವಿರುವ ಎಲ್ಲ ಉದ್ಯೋಗಗಳ ರಾಷ್ಟ್ರೀಕರಣವು ಮೊದಲು ಆಗಲೇಬೇಕು.

ಉದಾಹರಣೆಗಾಗಿ ಹತ್ತಿಯ ಉದ್ಯೋಗವನ್ನು ತೆಗೆದು ಕೊಳ್ಳೋಣ. ಮುಂಬಯಿ, ಅಹಮ್ಮದಾಬಾದ, ಕಲಕತ್ತಾ, ಸೋಲಾಪೂರ ಮೊದಲಾದ ಕಡೆಗೆ ಇರುವ ಎಲ್ಲ ಗಿರಣಿಗಳು ರಾಷ್ಟ್ರದ್ದೆಂದು ಸರಕಾರವು ಘೋಷಿಸಬೇಕು. ಸರಕಾರವು ಹತ್ತಿಯ ವ್ಯವಸಾಯದ ಖಾತೆಯೊಂದನ್ನು ನಿರ್ಮಿಸಿ, ಗಿರಣಿಯ ಪ್ರತಿನಿಧಿಗಳೊಂದಿಗೆ, ರಾಷ್ಟ್ರದ ಆರ್ಥಿಕ ಯೋಜನೆಯಂತೆ ಗಿರಣಿಗಳನ್ನು ನಡೆಯಿಸಬೇಕು. ಜನತೆಯ ಬೇಡಿಕೆ ಎಷ್ಟು? ಯಾವ ರೀತಿಯ ಬಟ್ಟೆಗಳನ್ನು ಎಷ್ಟು ಹುಟ್ಟಿಸಬೇಕು ಹತ್ತಿಯ ಸಂಗ್ರಹವನ್ನು ಎಷ್ಟು ಮಾಡಬೇಕು ಇವೇ ಮೊದಲಾದ ಕಾರ್ಯಗಳೆಲ್ಲ ಈ ಯೋಜನೆಗಳಲ್ಲಿಯೇ ಅಡಕವಾಗುತ್ತವೆ.

ಸದ್ಯದ ಪರಿಸ್ಥಿತಿಯಲ್ಲಿ ಅರಿವೆಯು ಸಾಲದಾದರೆ ಪ್ರತಿಯೊಬ್ಬರಿಗೆ ಇಂತಿಷ್ಟೆ ಬಟ್ಟೆಯನ್ನು ಕೊಡಬೇಕೆಂದು ನಿರ್ಬಂಧಿಸಬೇಕಾಗುವದು. ಹುಟ್ಟುವಳಿಯು ಸಾಕಷ್ಟಾದಾಗ ಪೇಟೆಯಲ್ಲಿ ಮಾರಲು ಇಡಬಹುದು. ಇಂತಿಷ್ಟೇ ಬಟ್ಟೆಯನ್ನು ಕೊಡಬೇಕೆಂಬ ನಿರ್ಬಂಧವು ಹಲವರಿಗೆ ರುಚಿಸಲಿಕ್ಕಿಲ್ಲ. ಆದರೆ, ಮರ್ಯಾದೆಯನ್ನು ಮುಚ್ಚಿಕೊಳ್ಳಲು ಕೂಡ ಗತಿಯಿಲ್ಲದ ಬಡವರಿಗೆ, ಮಾತ್ರ ಹಿಡಿಸಲಾರದಷ್ಟು ಆನಂದವಾಗುತ್ತದೆ.

ಇನ್ನು ಗಿರಣಿಗಳಲ್ಲ ದುಡಿಯುವ ಕೂಲಿಕಾರರ ಪರಿಸ್ಥಿತಿ ಏನಾಗುವದು? ವ್ಯಕ್ತಿಗಳ ದಾಸರಾಗಿ (ಗುಲಾಮರಾಗಿ)ದ್ದ ಅವರು, ತಾವು ದುಡಿಯುವ ಗಿರಣಿಗಳ ಒಡೆಯರಾಗುವರು. ಅವರ ಸಂಘಗಳ, ಮತ್ತು ಪ್ರತಿನಿಧಿಗಳ ಮನಸ್ಸಿನಂತೆಯೇ ರಾಷ್ಟ್ರದ ಹಿತವನ್ನು ಕಣ್ಣೆ ಮುಂದಿಟ್ಟುಕೊಂಡು, ಗಿರಣಿಗಳು ನಡಿಸಲ್ಪಡುವವು. ಲಾಭದ ಪ್ರಮಾಣದಿಂದ ಅವರ ಸಂಬಳವೂ ಬೆಳೆಯುವದು. ಅವರಿಗಾಗಿ ಶುದ್ಧ ಹವೆ, ಬೆಳಕುಗಳುಳ್ಳ ಮನೆಗಳು ಕಟ್ಟಲ್ಪಡುವವು. ದುಡಿತದ ಕಾಲವು ಕಡಿಮೆಯಾಗಿ, ಬೌದ್ಧಿಕ ಬೆಳವಣಿಗೆಗೆ ಅನುಕೂಲವಾಗುವದು. ಮಕ್ಕಳಿಗಾಗಿಯೂ, ದೊಡ್ಡವರಿಗಾಗಿಯೂ ಶಾಲೆಗಳು ತೆರೆಯಲ್ಪಡುವವು. ಸೂತಿಕಾ ಗೃಹಗಳು, ಉಪವನಗಳು, ವಾಚನಾಲಯಗಳು ಗರಡಿಮನೆಗಳು, ವಸ್ತು ಪ್ರದರ್ಶನಾಲಯಗಳು ಮೊದಲಾದ ಸಂಸ್ಥೆಗಳು ಅವರಿ

ಗಾಗಿ ತೆರೆಯಲ್ಪಡುವವು. ಒಂದು ಬಗೆಯಿಂದ ಅವರು ಹೊಸ ಜಗತ್ತಿನಲ್ಲಿ ಕಾಲಿಡುವರು. ತಮ್ಮ ಬುದ್ಧಿಯನ್ನು ಉಪಯೋಗಿಸುವ ಸಂಧಿ, ಸ್ವಾತಂತ್ರ್ಯ, ಸಾಂಸ್ಕೃತಿಕಬೆಳವಣಿಗೆಗೆ ಅನುಕೂಲ ಇವುಗಳಿಂದ ಅವರು ಹೊಸ ಬೆಳಕನ್ನು ಕಂಡು ಇಲ್ಲಿಯ ವರೆಗೆ ಗುಪ್ತವಾಗಿದ್ದ ಅವರ ಶಕ್ತಿಯು ಬೆಳಕಿಗೆ ಬಂದು ಮಾನವನ ಸಂಸ್ಕೃತಿಯ ಬೆಳವಣಿಗೆಗೆ ನೆರವಾಗುವದು.

ಇನ್ನು ಗಿರಣಿಗಳ ಒಡೆಯರ ಪಾಡೇನು? ಕೆಲಸಗಾರರೊಡನೆ ಅವರೂ ಕೆಲಸಗಾರರಾಗಬೇಕಾಗುವದು. ಬುದ್ಧಿಯುಳ್ಳವರೂ ತಜ್ಞರೂ ಇದ್ದರೆ, ಯೋಗ್ಯತೆಯಂತೆ ವ್ಯವಸ್ಥಾಪಕರಾಗಿ ದುಡಿದು ರಾಷ್ಟ್ರದ ಸೇವೆಯನ್ನು ಮಾಡಬೇಕು.

ಗಿರಣಿಗಳನ್ನು ತೆಗೆದುಕೊಂಡದ್ದಕ್ಕೆ ಕೆಲವೊಂದು ಮಟ್ಟಿಗೆ ಪ್ರತಿಫಲವನ್ನು ಕೊಡಲಾಗುವದು. ಅಲ್ಲದೆ ತಮ್ಮ ಬಳಿಕೆಗೆಂದು ಇಟ್ಟುಕೊಂಡ ಸ್ವಂತ ಅವರ ಸೊತ್ತಿಗೆ ಕೈಹಚ್ಚುವದಿಲ್ಲ. ಎಲ್ಲರಂತೆ ದುಡಿಯುವ ಇವರಿಗೂ ಎಲ್ಲ ಬಗೆಯ ಸರಕುಗಳನ್ನು ರಾಷ್ಟ್ರವು ಪೂರೈಸುತ್ತಿದ್ದರೆ, ಇವರಿಗೆ ಹೆಚ್ಚಿನ ಹಣದ ಹಂಬಲವಾದರೂ ಏಕೆ? ಉದಾರ ಅಂತಃಕರಣವುಳ್ಳ ಒಡೆಯರು ಈ ನೂತನ ಸಮಾಜ ಸಂಘಟನೆಗೆ, ಆನಂದದಿಂದ ನೆರವಾಗುವರು.

ಆದರೆ, ತಾವು ಒಡೆಯರು ಎಂಬ ಅಹಂಕಾರದಿಂದ ತುಂಟತನವನ್ನು ನಡೆಯಿಸಿದರೆ ಮಾತ್ರ ರಾಷ್ಟ್ರವು ಸಹನಮಾಡಲಿಕ್ಕಿಲ್ಲ. ಹೊಸ ವ್ಯವಸ್ಥೆಯನ್ನು ಪ್ರತಿಭಟಿಸಿದರೆ, ಅದರ ಉಪಕ್ರಮಗಳನ್ನು ತಿರಸ್ಕರಿಸಿದರೆ, ಅದರ ವಿರುದ್ಧವಾಗಿ ಒಳಸಂಚು ನಡೆಸಿದರೆ, ಅವರ ಕಡೆಗಾಲವು ಬಂದಿತು ಎಂದು ಅವರು ಸ್ಪಷ್ಟವಾಗಿ ತಿಳಿಯಬೇಕು. ಯಾಕಂದರೆ, ರಾಷ್ಟ್ರವು ಇಂಥವುಗಳನ್ನು ರಾಷ್ಟ್ರದ್ರೋಹವೆಂದು ತಿಳಿಯುವದು. ರಾಷ್ಟ್ರದ ದೃಷ್ಟಿಯಿಂದ ಜನತೆಯ ದೃಷ್ಟಿಯಿಂದ ಅವರು ಅಪರಾಧಿಗಳಾಗಿ ಶಿಕ್ಷೆಗೆ ಗುರಿಯಾಗಬೇಕಾಗುವದು. ಹೊಸ ಘಟನೆಯ ಆಡಳಿತೆಯಲ್ಲಿ ಒಡೆಯರ ಪಾಡು ಅವರ ನಡತೆಯನ್ನೇ ಅವಲಂಬಿಸಿರುತ್ತದೆ.

ಹತ್ತಿಯ ಉದ್ಯೋಗದಂತೆಯೇ ರಾಷ್ಟ್ರವು ಮಾನವ ಜೀವನಕ್ಕೆ ಉಪಯುಕ್ತವಾದ ಎಲ್ಲ ಉದ್ಯೋಗಗಳನ್ನು ಕೈಕೊಳ್ಳುವದು. ಸಂಘಟಿತವಾದ ಉತ್ಪಾದನೆಯೊಂದಿಗೇ ಸರಿಯಾದ ಹಂಚುವಿಕೆಯೂ ನಡೆಯುವದು.

**೪. ವಿದೇಶದ ವ್ಯಾಪಾರದಲ್ಲಿ ರಾಷ್ಟ್ರದ ವಿಶೇಷಾಧಿಕಾರ**–ಆರ್ಥಿಕ ಯೋಜನೆಯ ದೃಷ್ಟಿಯಿಂದ ವಿದೇಶದ ವ್ಯಾಪಾರದ ಪೂರ್ಣ ಅಧಿಕಾರವು ರಾಷ್ಟ್ರದ ವಶದಲ್ಲಿರುವದು ಅತ್ಯಂತ ಅಗತ್ಯವಿದೆ. ಆಯಾತ ನಿರ್ಯಾತಗಳನ್ನು ತನಗೆಸರಿಕಂಡ ರೀತಿಯಲ್ಲಿ ನಿರ್ಣಯಿಸುವ ಅಧಿಕಾರವುರಾಷ್ಟ್ರಕ್ಕೆ ಬೇಕು. ಇದೇ ಇದರಲ್ಲಿಯ ಮಹತ್ವವಾದ ಮಾತು. ವ್ಯಕ್ತಿಗಳ ಕೈಯಲ್ಲಿ ಅಧಿಕಾರವಿದ್ದರೆ, ಅವರು ರಾಷ್ಟ್ರದ ಹಿತಕ್ಕಿಂತಲೂ ತಮ್ಮ ಲಾಭದ ಕಡೆಗೇ ಹೆಚ್ಚು ಗಮನ ಕೊಡುವದು ಸ್ವಾಭಾವಿಕ. ಇದರಿಂದಲೇ ಇಂದು ದೇಶದಲ್ಲಿ ಬರಗಾಲವಿದ್ದರೂ ಗೋದಿಯೂ ಕಾಳುಗಳೂ ಹೊರ ದೇಶಕ್ಕೆ ಹೋಗುತ್ತವೆ. ನಮ್ಮ ದೇಶದ ಹತ್ತಿಗೆ ಧಾರಣೆ ಇಲ್ಲದಿದ್ದರೂ ಪರದೇಶದ ಹತ್ತಿಯು ನಮ್ಮ ದೇಶದಲ್ಲಿ ನುಗ್ಗುತ್ತಿರುವದು. ಆದರೆ ರಾಷ್ಟ್ರದ ಕೈಯಲ್ಲಿದ್ದರೆ! ಇದೆಲ್ಲವನ್ನು ನಿಯಂತ್ರಿಸುವದು.

ಇಷ್ಟೇ ಅಲ್ಲ ವ್ಯಕ್ತಿಗಳ ಕೈಯಲ್ಲಿ (ಬಂಡವಲದಾರರ) ವಿದೇಶೀ ವ್ಯಾಪಾರವು ಉಳಿದರೆ, ಸಾಮ್ಯವಾದವು ಅಳಿದಂತೆಯೇ ಸರಿ. ಆರ್ಥಿಕ ಯೋಜನೆಯನ್ನು ಕೈಕೊಳ್ಳುವದೇ ಅಸಾಧ್ಯ. ಅಧಿಕಾರವಿಲ್ಲದೆ, ನಾಣ್ಯಗಳ ಚಲನ, ಉತ್ಪಾದನ, ಕ್ರಯ, ವಿಕ್ರಯಗಳನ್ನು ನಿಯಂತ್ರಿಸುವ ಬಗೆ ಹೇಗೆ? ಇದರಿಂದ ರಾಷ್ಟ್ರದ ಔದ್ಯೋಗಿಕ ಅಥವಾ ಒಕ್ಕಲತನದ ಯಾವ ಬಗೆಯ ಬೆಳವಣಿಗೆಯನ್ನೂ ಮಾಡಲು ಸಾಧ್ಯವಾಗುವದಿಲ್ಲ. ಆರ್ಥಿಕ ಯೋಜನೆಯೂ ಮಂಜಿನಂತೆ ಮಾಯವಾಗುವದು. ಈ ವಿದೇಶಿಯ ವ್ಯಾಪಾರವನ್ನು ವ್ಯಕ್ತಿಗತವಾಗಿಯೇ ಉಳಿಯಗೊಟ್ಟರೆ, ನಮ್ಮ ಹಗೆಗಳಿಗೆ, ರಾಷ್ಟ್ರದ ಆರ್ಥಿಕ ಯೋಜನೆಯನ್ನು ಹಾಳು ಮಾಡಲು ಅನುವು ಮಾಡಿಕೊಟ್ಟಂತಾಗುವದು.

ಪರದೇಶದ ವ್ಯಾಪಾರವು ರಾಷ್ಟ್ರದ ಜೀವಾಳದಂತಿದೆ. ಅದು ರಾಷ್ಟ್ರದ ವಶದಲ್ಲಿಯೇ ಇರುವದು ಅವಶ್ಯ. ಇಲ್ಲದಿದ್ದರೆ, ಸಾಮ್ಯವಾದದ ಆರ್ಥಿಕ ಯೋಜನೆಯು ನಡೆಯಲ್ಲಿಕೆಯುವದು ಅಶಕ್ಯ.

**೫. ರಾಷ್ಟ್ರೀಕರಣವಾಗದ ಉದ್ಯೋಗಗಳನ್ನು ಸಹಕಾರ ಸಂಘಗಳಿಂದ ಸಾಗಿಸುವದು:-** ರಾಷ್ಟ್ರದೊಳಗಿನ ಎಲ್ಲ ಉದ್ಯೋಗಗಳನ್ನು ಒಮ್ಮೆಲೆ ರಾಷ್ಟ್ರೀಕರಣಮಾಡುವದು ಅಸಾಧ್ಯವೂ ಅನಿಷ್ಟವೂ ಆಗಿದೆ. ಆದುದರಿಂದ ಮೊದಲು ಮುಖ್ಯ ಉದ್ಯೋಗಗಳ ರಾಷ್ಟ್ರೀಕರಣವಾಗಬೇಕು. ಇನ್ನೂ ಹಲವು ಚಿಕ್ಕ ಪುಟ್ಟ ಉದ್ಯೋಗಗಳು ವ್ಯಕ್ತಿ ಒಡೆತನದಲ್ಲಿ ಉಳಿಯುವವು. ಇವುಗಳನ್ನೂ ರಾಷ್ಟ್ರೀಕರಣ ಮಾಡುವ ಹಂಚಿಕೆಯೇ ಇದು. ಅಂದರೆ, ಇಂಥ ಉದ್ಯಮಗಳ ವ್ಯಕ್ತಿ ಒಡೆತನವನ್ನಳಿದು, ಸಾಂಘಿಕವಾಗಿ ಸಾಗಿಸುವದು.

ಸಾಮ್ಯವಾದದ ಸರಕಾರವು ಪ್ರಾರಂಭವಾದೊಡನೆಯೇ ಚಿಕ್ಕ ಹಳ್ಳಿಯೊಳಗಿನ ಚಿಕ್ಕ ತಕ್ಕಡಿಯ ಅಂಗಡಿಗಳನ್ನು ಕೂಡ ವಶಪಡಿಸಿಕೊಳ್ಳುವದು ಸಾಧ್ಯವಿಲ್ಲ ಕ್ರಮೇಣ ಪ್ರತಿಯೊಂದು ಕಡೆಗೂ ಸರಕಾರದ ಉಗ್ರಾಣಗಳನ್ನು ತೆರೆಯಬಹುದು. ಆದರೆ ಅಲ್ಲಿಯ ವರೆಗೆ, ವ್ಯಕ್ತಿ ಒಡೆತನವನ್ನು ಉಳಿಯಿಸುವದು ತತ್ವದದೃಷ್ಟಿಯಿಂದ ಅಯೋಗ್ಯವು. ಇವುಗಳಿಂದ ದೊಡ್ಡ ಅಪಾಯವೇನೂ ಆಗದಿದ್ದರೂ ಸಾಮ್ಯವಾದದ ಕಡು ಹಗೆಗಳನ್ನು ಜೀವಂತವಿಡುವದು ಬುದ್ಧಿವಂತಿಕೆಯಾಗಲಾರದು. ಆದ್ದರಿಂದ ವ್ಯಕ್ತಿ ಒಡೆತನವನ್ನು ತಳ್ಳಿ ಅಂತಹವುಗಳನ್ನು ಸಹಕಾರದಿಂದ ಸಾಗಿಸಬೇಕು. ಈ ಚಿಕ್ಕ ತಕ್ಕಡಿ ಅಂಗಡಿಯವರು ಈ ಸಹಕಾರ ಸಂಘಗಳೊಡನೆ ಸಹಕರಿಸಬೇಕು. ಇಲ್ಲವಾದರೆ, ಸ್ಪರ್ಧೆಯಿಂದ ಅವರನ್ನು ನದೆಬಡಿಯಬೇಕು. ಸಂಘಟಿತವಾದ ಸುಸಜ್ಜಿತವಾದ ಸಂಘಗಳಿಗೆ, ಇದು ಸುಲಭಸಾಧ್ಯ. ಸಂಘಟನೆಯ ಮುಂದೆ ವ್ಯಕ್ತಿಗಳ ಆಟವು ಸಾಗಲಾರದು. ಅದರಲ್ಲಿಯೂ ರಾಷ್ಟ್ರದ ಸಹಾಯವಿದ್ದರೆ ಕೇಳುವದೇನು ? ಅಂದರೆ ಸ್ವಾಭಾವಿಕವಾಗಿ ರಾಷ್ಟ್ರವು ವ್ಯಕ್ತಿ ಒಡೆತನವನ್ನು ಅಳಿದಂತಾಗುವದು.

**೬. ರಾಜರನ್ನೂ ಜಮೀನದಾರರನ್ನೂ ಮತ್ತು ಎಲ್ಲ ವರ್ಗದ ಸುಲಿಗೆಗಾರರನ್ನೂ ಪ್ರತಿಫಲವಿಲ್ಲದೆ ಪದಚ್ಯುತರನ್ನಾಗಿ ಮಾಡುವದು:**-ಆರ್ಥಿಕ ಅಸಮಾನತೆಯು ಮಾಯವಾಗಿ, ಬಡವರು ಶ್ರೀಮಂತರು ಶೇವ ರು ಸೇವಕರು, ಎಂಬ ಉಚ್ಚನೀಚ ಕಲ್ಪನೆಗಳಿಲ್ಲದ ಸಮಾಜವನ್ನು ನಿರ್ಮಿಸುವದೇ ನಮ್ಮ ಗುರಿಯಾಗಿದ್ದರೆ, ಮೇಲ್ಕಂಡ ಉಪಾಯವು ಕ್ರಮಪ್ರಾಪ್ತವಾಗುವದು.

ರಾಜರು, ಸಂಸ್ಥಾನಿಕರು, ಸರದಾರರೇ ಮೊದಲಾದವರೆಲ್ಲರೂ, ಇಂದಿನ ಜೀವನಕ್ಕೆ ನಿರುಪಯೋಗಿ. ಇಷ್ಟೇ ಅಲ್ಲ, ಮಾನವನ ಪ್ರಗತಿಗೆ, ಕಾಲ್ತೊಡಕು. ಸಾಮ್ರಾಜ್ಯವಾದವು ಇವರನ್ನು ಕೇವಲ ತನಗೋಸುಗ, ಸಾಕಿ ಸಲಹುತ್ತಿರುವದು. ಇಲ್ಲದಿದ್ದರೆ, ಈ ಕ್ರಾಂತಿಯುಗವು ಇವರನ್ನು ಎಂದೋ ಕೊಚ್ಚಿಕೊಂಡು ಹೋಗುತ್ತಿತ್ತು.

ನಮ್ಮಲ್ಲಿಯ ರಾಜರು ನಿರಂಕುಶ ಪ್ರಭುತ್ವಕ್ಕೆ ಜಗತ್ತಿನಲ್ಲಿಯೇ ಹೆಸರಾದವರು. ರಾಷ್ಟ್ರದ ಹೊಣೆಯನ್ನರಿಯದ ಇಂತಹ ಜನಗಳ ಕೈಯಲ್ಲಿದ್ದಷ್ಟು ಅಧಿಕಾರವು ಇನ್ನೆಲ್ಲಿಯೂ ಕಂಡು ಬರುವದಿಲ್ಲ. ಇದರಿಂದ ಜನಾಂಗಕ್ಕೆ ಅಪಾರವಾದ ಹಾನಿಯಾಗಿರುವದು. ಆದರೂ ರಾಜರ ಆಳಿಕೆಯನ್ನು ಕೊನೆಗಾಣಿಸಲು ಯೋಚಿಸುವದು ಇದಕ್ಕಾಗಿಯಲ್ಲ.

ಅರಸೊತ್ತಿಗೆಯ ಪದ್ಧತಿಯನ್ನೇ ನಾವು ದೂರುವದು, ಅವರ ಅತ್ಯಾಚಾರಗಳನ್ನಲ್ಲ. ಧರ್ಮರಾಜನಂಥ ಒಳ್ಳೇ ರಾಜನಿರಬಹುದು, ಉದಾರ ಅಂತಃಕರುಣೆಗಳಾದ ಜಮೀನದಾರರಿರಬಹುದು. ಆದರೆ, ಇಷ್ಟರಿಂದಲೇ ಈ ಬಂಡವಲವಾದದ ಪದ್ಧತಿಯಲ್ಲಿರುವ ದೋಷಗಳು ಎಂದೂ ನಾಶವಾಗವು. ಇವರು ಎಷ್ಟೇ ಒಳ್ಳೆಯವರಾದರೂ ಈ ಪದ್ಧತಿಯ ಅನ್ಯಾಯವೂ ಸುಲಿಗೆಯೂ ತಪ್ಪಿದ್ದಲ್ಲ.

ನಮ್ಮ ಯೋಜನೆಯು ಪೂರ್ಣವಾಗಿ ತಿಳಿಯಬೇಕಾದರೆ. ಮನವಟ್ಟಾಗಬೇಕಾದರೆ, ಈ ಸಂಗತಿಯನ್ನು ಚನ್ನಾಗಿ ತಿಳಿದುಕೊಳ್ಳುವದು ಅವಶ್ಯವು.

ಸ್ವತಂತ್ರ ಭಾರತದಲ್ಲಿ ಶಾಸನ ಸಮ್ಮತರಾದ ರಾಜರಿದ್ದರೇನು ಕೆಡಕು ಎಂದು ಕೇಳಬಹುದು. ಇದರಲ್ಲಿಯೂ ಅರ್ಥವಿಲ್ಲ. ಪ್ರಜಾ ಪ್ರಭುತ್ವಕ್ಕೆ ರಾಜತ್ವವು ಒಂದು ತೊಡಕು. ರಾಜರಿರುವದರಿಂದ ರಾಷ್ಟ್ರಕ್ಕೇನು ಸಹಾಯ? ಸಹಾಯದ ಬದಲು ಹಾನಿಯೇ ಹೆಚ್ಚೆಂಬುದು ಎಲ್ಲರಿಗೂ ಈಕಾಲದಲ್ಲಿ ಮನವರಿಕೆಯಾಗಿದೆ. ಇದೇ ಮಾತೇ ಜಮೀನದಾರ, ಜಹಗೀರದಾರ ಮೊದಲಾದವರಿಗೆ ಅನ್ವಯಿಸುವದು. ಭಾರತೀಯ ರಾಜ್ಯಪದ್ಧತಿಯಲ್ಲಿ ಸಾಗುವಳಿ ಮಾಡುವವರು ಗೊತ್ತುಮಾಡಲಟ್ಟ ಬೆಳೆಯ ಒಂದು ಭಾಗವನ್ನು ಅರಸನಿಗೆ, ಸಲ್ಲಿಸುವ ವಾಡಿಕೆ ಇತ್ತು. ಆದರೆ ಕಾಲಕ್ರಮೇಣ, ಈ ಜಹಗೀರದಾರ ಮೊದಲಾದ ವರ್ಗಗಳು ತಲೆ ಯೆತ್ತಿದವು. ಮೊದಲು ಈ ಮಧ್ಯಸ್ಥರಾರೂ ಇರಲಿಲ್ಲ.

ಈ ಜಮೀನದಾರ ಪದ್ಧತಿಯನ್ನು ನಿರ್ಮೂಲಿಸಬೇಕೆಂದು ಹೇಳುವ ನಾವು ರಶಿಯನ್ನರ ಬೋಲ್ಶೆವಿಕ ಪದ್ಧತಿಯನ್ನು ಅನುಸರಿಸುತ್ತಿರುವೆವು, ನಮ್ಮ ಸಂಸ್ಕೃತಿ ಪರಂಪರೆಗಳನ್ನು ನಾಶ ಮಾಡುತ್ತಿರುವೆವೆಂದು ನಮ್ಮನ್ನು ತೆಗಳುವರು. ಇದು ತೀರ ವಿಲಕ್ಷಣ.

ಈ ವರ್ಗಗಳು ರಾಷ್ಟ್ರದ ಸಂಪತ್ತನ್ನು ಎಳ್ಳಷ್ಟೂ ಬೆಳಿಸುವದಿಲ್ಲ. ಇಷ್ಟೇ ಅಲ್ಲ, ಸ್ವೇಚ್ಛಾಚಾರ, ಸೋಮಾರಿತನ, ದುರ್ವರ್ತನಗಳಿಗೆ ತವರು ಮನೆಯಾಗಿವೆ. ರಾಷ್ಟ್ರಕ್ಕೂ ಜನತೆಗೂ, ಕಂಟಕವಾಗಿವೆ. ಇವರಿಂದ ರಾಷ್ಟ್ರಕ್ಕೆ ಅಪರಿಮಿತ ಹಾನಿಯಾಗಿದೆ. ಯಾವ ಸಾಮಾಜಿಕ ಕರ್ತವ್ಯ ವನ್ನೂ ಮಾಡದೆ, ರಾಷ್ಟ್ರದ ಹುಟ್ಟುವಳಿಯ (ಸಂಪತ್ತಿನ) ಬಹು ಭಾಗ ವನ್ನು ತೆಗೆದು ಕೊಳ್ಳುವದು ಯಾವ ನ್ಯಾಯ? ಎಲ್ಲಿಯ ನೀತಿ? ಈ ಧನದ ಭಾಗವು ನಿಜವಾಗಿಯೂ ಸಾಗುವಳಿ ಮಾಡಿದವನದಲ್ಲವೇ!

ಇವರ ವಿಷಯವಾಗಿ ಸಾಮ್ಯವಾದಿಯಲ್ಲದ **ಶ್ರೀ. ಎಮ್. ಎಲ್. ಡಾರ್ಲಿಂಗರು** ಪಂಜಾಬದ ಜಮೀನದಾರರ ವಿಷಯಕ್ಕೆ ತೆಗೆದ ಉದ್ಗಾರ ಗಳನ್ನು ನೋಡಿರಿ.

**"ಇಡೀ ಪ್ರಾಂತದ ದೃಷ್ಟಿಯಿಂದ ಸಮಾಜದ ಮೇಲೆ, ಸಾವುಕಾರರಿಗಿಂತ ಜಮೀನದಾರರ ಭಾರವೇ ಹೆಚ್ಚು. ಸಾವುಕಾರನು ಕೇಡೆಂಬುದು ನಿಜ. ಆದರೆ**

ಅವನ ಬದಲು ಇನ್ನೊಂದು ಏರ್ಪಾಡು ಆಗುವವರೆಗೆ, ಅವನು ಸಮಾಜಕ್ಕೆ ಅಗತ್ಯವಾಗಿ ಬೇಕಾದವನು ಎಂದು ಹೇಳಬಹುದು. ಆದರೆ ಜಹಗೀರದಾರನು ಮಾತ್ರ ಒಕ್ಕಲುಗಳ (Tenants) ಶ್ರಮವನ್ನು ಅವಲಂಬಿಸಿ, ಬಾಳುವ ಪ್ರಾಣಿ. ತಾನು ಹಾಳಾಗಿ ನೆರೆಹೊರೆಯವರನ್ನೆಲ್ಲ ಕೆಡಿಸುವನು."

ಇವರ ಅನ್ಯಾಯವು ಒತ್ತಟ್ಟಿಗಿರಲಿ. **ಈ ವರ್ಗ ಭೇದವೇ ಮಾನವ ಜನಾಂಗಕ್ಕೆ ಅಪಮಾನ.** ಭಾರತದಲ್ಲಿ ಭೂಮಿಯೇ ಹುಟ್ಟು ವಳಿಯ ಮೂಲ ಸಾಧನ, ಜೀವನಾಧಾರ. ಇದೇ ವ್ಯಕ್ತಿ ಒಡೆತನಕ್ಕೆ ಒಳಪಟ್ಟರೆ ಜನಾಂಗದ ಪಾಡೇನು? ವ್ಯಕ್ತಿ ಒಡೆತನದ ಸುಲಿಗೆಯಿಂದ ಆರ್ಥಿಕ ಅಸಮಾನತೆಯು ಉಂಟಾಗುವದು ಸ್ವಾಭಾವಿಕ.

ಈ ರೀತಿಯಾಗಿ ಅತ್ಯಾಚಾರಗಳನ್ನೂ ಪಟ್ಯಾಳಿಕೆಯನ್ನೂ ಇವ ರನ್ನೂ (ವ್ಯಕ್ತಿ ಒಡೆತನವನ್ನು) ಜೀವಂತವಿಟ್ಟು ನಡೆಸುವದರಲ್ಲಿ ಯಾವ ಪುರುಷಾರ್ಥವಿದೆ? ರಾಷ್ಟ್ರದ ದೃಷ್ಟಿಯಿಂದ ಏನು ಲಾಭ?

ಇನ್ನು ಪರಿಹಾರದ ಪ್ರಶ್ನೆ. ಬಂಡವಲದಾರರಂತೆಯೇ ಇವರಿಗೂ ಪ್ರತಿಫಲವನ್ನು ಕೊಡಬಹುದು.

**೭. ಹೊಲಗದ್ದೆಗಳನ್ನೆಲ್ಲ ಒಕ್ಕಲಿಗರಲ್ಲಿ ಮತ್ತೆ ಹಂಚುವದು.** ರಾಷ್ಟ್ರದ ಒಡೆತನವೇ ನಮ್ಮ ಗುರಿಯೆಂದಬಳಿಕ ಮರಳಿ ಎಲ್ಲರಿಗೂ ಭೂಮಿಯನ್ನು ಹಂಚಿಕೊಡಬೇಕೆಂಬ ಮಾತು ವಿಲಕ್ಷಣವಾಗಿ ತೋರ ಬಹುದು. ಜನಾಂಗದ ಒಡೆತನದಲ್ಲಿ ಭೂಮಿಯೆಲ್ಲ ಒಮ್ಮೆಲೆ ಸಾಗುವಳಿ ಯಾಗುವದು ಮೊದಲು ಬಹು ಕಠಿಣ. ಸಾಮ್ಯವಾದೀ ಸರಕಾರವು ಸ್ಥಾಪಿತವಾಗಿ ಕೆಲವು ಕಾಲದ ನಂತರ ಇದು ಸುಲಭವಾಗಿ ಸಾಧಿಸ ಬಹುದು. ಮೊದಮೊದಲು ಭೂಮಿಯನ್ನು ಒಕ್ಕಲಿಗರ ಒಡೆತನದಲ್ಲಿರಿಸು ವದು ಯೋಗ್ಯವಿದೆ. ಸಧ್ಯಕ್ಕೆ ಈ ಹೊಲಗದ್ದೆಗಳಲ್ಲಿ ಕೂಡ ಅತ್ಯಂತ ವಿಷಮತೆಯು ಕಂಡುಬರುತ್ತದೆ. ಅದನ್ನು ಸರಿಪಡಿಸಿ ಮತ್ತೊಮ್ಮೆ ಹಂಚುವದು ಅವಶ್ಯವಿದೆ.

**೮. ಸಾಮೂಹಿಕವಾದ ಸಹಕಾರದ ಒಕ್ಕಲತನಕ್ಕೆ ರಾಷ್ಟ್ರದ ಬೆಂಬಲ ಮತ್ತು ಪ್ರೋತ್ಸಾಹ—** ಈ ವಿಷಯವಾಗಿ ಸಾಮ್ಯವಾದಿ

ಗಳಲ್ಲಿ ಕೂಡ ಬಹು ಯೋಜನೆ. ಅನೇಕ ಮುತ್ಸದ್ದಿಗಳ ತಲೆ ಕೆಡಿಸುವಂತಹದು. ಭಾರತೀಯ ಸೋಶ್ಯಾಲಿಸ್ಟ ಸರಕಾರಕ್ಕಂತೂ ಇನ್ನೂ ಹೆಚ್ಚು ಕಷ್ಟಗಳಿವೆ. ಆದುದರಿಂದ ಈ ವಿಷಯವನ್ನು ಕೂಲಂಕಷವಾಗಿ ಶಾಂತರೀತಿಯಿಂದ ವಿಚಾರ ಮಾಡುವದು ಅವಶ್ಯವಿದೆ.

ಭಾರತವು ಕೃಷಿಪ್ರಧಾನವಾದ ದೇಶ. ಇಲ್ಲೇಕೆ ಈ ಸಾಮ್ಯವಾದದ ಪಿಡುಗು ಎಂದು ಕೇಳುವ ಮಹನೀಯರು ಇರುವರೆಂಬುದನ್ನು ನಾನು ಬಲ್ಲೆ. ಜಗತ್ತಿನ ಸಧ್ಯದ ಪರಿಸ್ಥಿತಿಯಲ್ಲಿ ಸಾಮ್ಯವಾದವನ್ನು ಎಲ್ಲಿ ಬೇಕಾದರೂ ತರಬಹುದೆಂದು ಸಮಗಿಸುತ್ತದೆ. ಆರ್ಥಿಕ ಬಲುಮೆಯಿಂದ ಬಡವರನ್ನು ಬಳಲಿಸದ ಸ್ಥಳವೇ ಇಲ್ಲ. ಇರಲಿ. ಸಾಮ್ಯವಾದದ ಶಕ್ಯಾಶಕ್ಯತೆಯು ಇಲ್ಲಿ ಮುಖ್ಯ ವಿಷಯವಲ್ಲ. ಸಾಮ್ಯವಾದದಿಂದ ಭಾರತದ ಒಕ್ಕಲತನ, ಒಕ್ಕಲಿಗ, ಮತ್ತು ಜನಾಂಗ ಇವುಗಳಿಗೆ ಲಾಭ ವಿದೆಯೆ? ಎಂಬುದೇ ಮುಖ್ಯ ವಿಷಯ. ನಮ್ಮ ಒಕ್ಕಲಿಗರನ್ನೂ ಒಕ್ಕಲತನವನ್ನೂ ಅಳಿಗಾಲದಿಂದ ಉಳಿಸಲು ಸಾಮ್ಯವಾದವೊಂದೇ ಉಪಾಯವೆಂದು ನಾವು ಸಾರಿಸಾರಿ ಹೇಳುತ್ತೇವೆ. ಇದೇ ಒಕ್ಕಲಿಗರ ಏಳ್ಗೆಯನ್ನು ಮಾಡಬಲ್ಲುದು. ಅದುವೇ ಜನಾಂಗವನ್ನು ಪ್ರಭಾವಶಾಲಿಯಾಗಿಯೂ, ಶಕ್ತಿಯುತವಾಗಿಯೂ ಮಾಡಬಲ್ಲುದು. ನಮ್ಮ ಒಕ್ಕಲಿಗರಿಗೆ ಮತ್ತು ಒಕ್ಕಲತನಕ್ಕೆ ಅಂಟಿದ ಬೇನೆಯ ಬೇರುಗಳು ಬಹು ಆಳವಾಗಿವೆ. ಇದಕ್ಕೆ ತೀವ್ರತರವಾದ ಚಿಕಿತ್ಸೆಯು ಆದರೆ ಮಾತ್ರ ಅವು ಬದುಕಬಹುದು. ಸ್ವಲ್ಪದರಲ್ಲಿ ಹೇಳುವದೆಂದರೆ, ನಮ್ಮ ಒಕ್ಕಲತಕ್ಕೆ ಕೆಳಗಿನ ರೋಗಗಳು ಅಂಟಿಕೊಂಡಿವೆ.

(ಅ) ಸಾಗುಮಾಡುವ ಒಕ್ಕಲಿಗನ ಸುಲಿಗೆ ಮಾಡುವದಲ್ಲದೆ, ಆತನ ಔದಾಸೀನ್ಯತೆಯನ್ನು ಹೆಚ್ಚಿಸುವ, ಕಾರ್ಯಕ್ಷಮತೆಯನ್ನು ಕುಗ್ಗಿಸುವ ಬಂಡವಲವಾದಿಗಳ ಹಿತಸಂಬಂಧಗಳು (vested interests)

(ಬ) ಪ್ರಮಾಣವಿಲ್ಲದ ಮಿತಿಮೀರಿದ ಕಂದಾಯ.

(ಕ) ಅವನು ಹೊರಲಾರದ ಸಾಲದ ಹೊರೆ.

(ಅ) ಒಕ್ಕಲತನಕ್ಕೆ ಅನುಕೂಲವಾಗದ ಹೊಲದ ಸಣ್ಣಸಣ್ಣ ತುಂಡು ಗಳು.

(ಇ) ಬಹಳ ಕಡಿಮೆ ಬೆಳೆ.

(ಈ) ಅತೃಪ್ತಿಕರವಾದ ಕ್ರಯವಿಕ್ರಯಗಳು.

(ಉ) ಕೃಷಿ ಹಾಗು ಉದ್ಯಮ ಇವುಗಳ ತೂಕ ತಪ್ಪುವಿಕೆ.

ಇವುಗಳೆಲ್ಲ ಪ್ರತಿಯೊಂದೂ ಸ್ವತಂತ್ರವಾದ ದೊಡ್ಡದೊಡ್ಡ ಸಮಸ್ಯೆ ಗಳಾಗಿವೆ. ಇವೆಲ್ಲವುಗಳನ್ನು ಪರಿಹರಿಸುವ ಹಂಚಿಕೆಯನ್ನು ಹುಡುಕು ವದು ಈಗಿನ ಪದ್ಧತಿಯಲ್ಲಿ ಯಾವ ಸುಧಾರಣೆಗೂ ಸಾಧ್ಯವಿಲ್ಲ.

ಒಕ್ಕಲಿಗರ ಸುಲಿಗೆಯನ್ನು ಮಾಡುವವರ ಹಿತಸಂಬಂಧಗಳನ್ನು ನಾಶಪಡಿಸುವದು, ಒಕ್ಕಲಿಗರನ್ನು ಸಾಲದಿಂದ ಮುಕ್ತಮಾಡುವದು, ತುಂಡು ತುಂಡು ಹೊಲಗಳನ್ನು ಜೋಡಿಸಿ, ಸಾಂಘಿಕ ಸಹಕಾರ ಪದ್ಧತಿ ಯಿಂದ ಭೂಮಿಯನ್ನು ಸಾಗುಮಾಡುವದು, ಸಹಕಾರದ ತತ್ವಕ್ಕನು- ಸರಿಸಿ, ಹುಟ್ಟುವಳಿಯ ಮಾರಾಟಕ್ಕೆ ಪೇಟೆಯನ್ನು ಅಣಿಮಾಡುವದು, ಸಹಕಾರದಿಂದ ಉಪ-ಉದ್ಯೋಗಗಳನ್ನು ಕೈಕೊಳ್ಳುವದು. ಇವೇ ಮುಂತಾದ ಸಾಮ್ಯವಾದದ ಯೋಜನೆಗಳೇ ಒಕ್ಕಲಿಗರನ್ನು ಉದ್ಧರಿಸ ಬಹುದು.

ಈ ವಿಚಾರಗಳು ಕ್ರಾಂತಿಕಾರಕವೂ ವಿಘಾತಕವೂ ಎಂದು ಯಾರೂ ಭಾವಿಸಬಾರದು. ಒಡೆಯ ಒಕ್ಕಲಿಗರ ಸಂಬಂಧದಲ್ಲಿ ಮನೆಮಾಡಿರುವ ಸುಲಿಗೆಯ ಪದ್ಧತಿಯನ್ನು ನಿರ್ಮೂಲಿಸುವದೇ ಇವುಗಳ ಮುಖ್ಯ ಉದ್ದೇಶ. ಮಿಕ್ಕುದೆಲ್ಲವೂ ಪೂರ್ಣವಿಧಾಯಕವಾಗಿದೆ. ಇದಕ್ಕೆ ಸರಕಾರವು ಬೆಂಬಲವನ್ನು ಕೊಟ್ಟು, ಪ್ರೋತ್ಸಾಹಿಸಬೇಕು.

"ತುಂಡು ತುಂಡಾದ ಹೊಲಗಳನ್ನೆಲ್ಲ ಒಂದುಗೂಡಿಸಿ ಸಹಕಾರದ ಹೊಲಗಳನ್ನು ಮಾಡಿ ಸಾಂಘಿಕವಾಗಿ ನಡೆಯಿಸದಿದ್ದರೆ, ಭಾರತದ ಕೃಷಿಯು ಸುಧಾರಿಸಲಾರದು.'' ಎಂದು **ಪ್ರೊ. ರಾಧಾ ಕಮಲ ಮುಕರ್ಜಿಯವರು** ಆಗ್ರಾದಲ್ಲಿಯ ತಮ್ಮ ಭಾಷಣದಲ್ಲಿ ಹೇಳಿದ್ದಾರೆ. ಇವರೇನು ಸಾಮ್ಯವಾದಿಗಳಲ್ಲವಷ್ಟೆ?

ಸಹಕಾರದ ಹೊಲದ ಒಕ್ಕಲಿಗನಿಗಿಂತ, ಸ್ವತಂತ್ರನಾದ ಒಕ್ಕಲಿಗನಿಗೆ ಗಂಡಾಂತರಗಳು ಹೆಚ್ಚು. ಹುಟ್ಟುವಳಿ, ಸರಕುಗಳ ವಿನಿಮಯ, ಸಾಲ ಮುಂತಾದವುಗಳ ವಿಚಾರದಲ್ಲಿ ಅವನಿಗಿಂತ ಇವನಿಗೆ ಸೌಕರ್ಯ ಕಡಿಮೆ. ಅಲ್ಲದೆ, ಒಂದು ದೊಡ್ಡ ಸಹಕಾರದ ಗುಂಪಿನಲ್ಲಿ, ಸಹಜವಾಗಿ ಸಿಕ್ಕುವ ಸೌಲಭ್ಯ ಮತ್ತು ಸುಖಸಂದರ್ಭಗಳು ಈ ಒಬ್ಬಂಟಿಗನಿಗೆ ಲಭಿಸವು. ಇದಲ್ಲದೆ, ಸ್ವಾರ್ಥಮಯವಾದ ವ್ಯಕ್ತಿತ್ವವನ್ನು ತೊರೆದು, ಸಂಘದೊಡನೆ ಸಮರಸನಾದ ಸಹಕಾರದ ಒಕ್ಕಲಿಗನಿಗಿಂತ ಈತನು ನೀತಿ ಸಂಸ್ಕೃತಿಗಳ ದೃಷ್ಟಿಯಿಂದ ಕೀಳೆನಿಸುವನು.

ಜನಾಂಗದ ದೃಷ್ಟಿಯಿಂದ ವಿಚಾರ ಮಾಡಿದರಂತೂ ಇನ್ನೂ ನಮ್ಮ ಪಕ್ಷವು ಬಲವಡೆಯುವುದು. ಒಕ್ಕಲಿಗನೂ ಸಮಾಜದ ಒಂದು ಘಟಕ—ಭಾರತದಲ್ಲಿ ಪ್ರಮುಖ ಘಟಕ—ಎಂಬುದನ್ನು ಮರೆಯಲಾಗದು.

ಜನಾಂಗವನ್ನು ಆರ್ಥಿಕ ಸುಲಿಗೆಯಿಂದ ಮುಕ್ತಮಾಡುವದಲ್ಲದೆ, ಜನಾಂಗದ ಆರ್ಥಿಕ ಮತ್ತು ಸಾಮಾಜಿಕ ಜೀವನದ ಬೆಳವಣಿಗೆಯನ್ನೂ ನಮಗೆ ಮಾಡಬೇಕಾಗಿದೆ. ಭಾರತಕ್ಕೆ ಕ್ರಮಬದ್ಧವಾದ ಸಾಮಾಜಿಕ, ವಿಕಾಸದ ಅವಶ್ಯಕತೆಯಿದೆ. ಏಕೆಂದರೆ ಸಾಮ್ರಾಜ್ಯವಾದದ ಸುಲಿಗೆಯಿಂದ ಇಲ್ಲಿಯ ಜೀವನವು ಬಲು ಅಸ್ತವ್ಯಸ್ತವಾಗಿದೆ. ಈಗಿನ ಜೀವನದ ಬುಡಕ್ಕೆ ಯಾವ ತತ್ವವೂ ಇಲ್ಲ.

ವೈಯಕ್ತಿಕ ಒಕ್ಕಲತನದಲ್ಲಿ ಆರ್ಥಿಕ ಯೋಜನೆಯನ್ನು ಕೈಕೊಳ್ಳುವದೇ ಶಕ್ಯವಿಲ್ಲ. ಯಾಕೆಂದರೆ, ಪ್ರತಿಯೊಬ್ಬನು ತನ್ನ ಹೊಲದಲ್ಲಿ ಅನೇಕ ರೀತಿಯ ಕಾಳುಕಡಿಗಳನ್ನು ಬೆಳೆಯುವನು. ಇದರಿಂದ ರಾಷ್ಟ್ರದ ಯೋಜನೆಯಂತೆ, ಹುಟ್ಟುವಳಿ ಮತ್ತು ಹಂಚುವಿಕೆಯನ್ನು ಹೇಗೆ ಮಾಡಬೇಕೆಂಬುದನ್ನೂ ಎಷ್ಟು ಕಷ್ಟಕರವಿದೆ ಎಂಬುದನ್ನೂ ವಿಚಾರಮಾಡಬೇಕು. ಯಾಕೆಂದರೆ, ನಿಯಂತ್ರಣಕ್ಕೆ ಎಡೆಯೇಯಿಲ್ಲ. ಇದು ಸಾಧ್ಯವೆ ? ಯಾವ ಬೆಳೆಯನ್ನು ಎಷ್ಟು ಬೆಳೆಯಬೇಕು ? ಕಾರಖಾನೆಗಳಲ್ಲಿ ಯಾವ ಸರಕುಗಳನ್ನು ಎಷ್ಟು ಹುಟ್ಟಿಸಬೇಕು ? ಯಾವ ಯಾವ ಸರಕುಗಳನ್ನು ದೇಶದ ಪರಿಸ್ಥಿತಿಗನುಸರಿಸಿ, ಆಹಾರಕ್ಕೆಂದು

ಕೊಡಬೇಕು? ರಾಷ್ಟ್ರಕ್ಕೆ ಬೇಕಾಗುವ ಸರಕುಗಳ ಆಯಾತಕ್ಕಾಗಿ, ಯಾವ ಸರಕುಗಳನ್ನು ಎಷ್ಟು ಪರರಾಷ್ಟ್ರಕ್ಕೆ ಕಳಿಸಬೇಕು? ಎಂಬ ಪ್ರಶ್ನೆಗಳಿಗೆಲ್ಲ ಉತ್ತರವು ಅವಶ್ಯವಿಲ್ಲವೆ?

ಹೀಗೆ ರಾಷ್ಟ್ರದ ದೃಷ್ಟಿಯಿಂದ ಈ ಎಲ್ಲ ಪ್ರಶ್ನೆಗಳನ್ನು ಬಿಡಿಸಬೇಕಾದರೆ, ನಮ್ಮ ಒಕ್ಕಲತನವನ್ನು ಸಂಘಟಿತವಾಗಿ ವಿಸ್ತಾರಗೊಳಿಸಬೇಕು. ಒಬ್ಬೊಬ್ಬ ಒಕ್ಕಲಿಗರ ಕೈಯಲ್ಲಿರುವ ತುಂಡು ತುಂಡು ಹೊಲಗಳನ್ನು ಒಟ್ಟುಗೂಡಿಸಿ, ಒಂದು ದೊಡ್ಡ ಘಟಕವನ್ನು ಮಾಡಬೇಕು. ಇಡೀ ಹಳ್ಳಿಯೇ ಒಂದು ಘಟಕವಾಗಿ ಕೃಷಿಯನ್ನು ಕೈಕೊಳ್ಳಬೇಕು. ಒಂದು ಘಟಕವು ಇನ್ನೊಂದು ಘಟಕದೊಡನೆ ಸಹಕರಿಸಿ, ಪ್ರತಿಯೊಂದು ಆರ್ಥಿಕ ಯೋಜನೆಯ ಒಂದು ಅಂಗವಾಗಿ, ಸಾಗುವಳಿಯನ್ನು ಮಾಡಿದರೆ ಮಾತ್ರ, ಆರ್ಥಿಕ ಯೋಜನೆಯು ಸಾಧ್ಯವಾಗುವದು. ಇದೇ ಸರಳವಾದ ಉತ್ತಮ ಮಾರ್ಗವು.

ವೈಯಕ್ತಿಕ ಒಕ್ಕಲತನದಲ್ಲಿಯೂ ಉತ್ಪತ್ತಿಯನ್ನು ನಿಯಂತ್ರಿಸಲಿಕ್ಕೆ ಬರಬಹುದು. ರಾಷ್ಟ್ರಕ್ಕೆ ಬೇಕಾದ ಬೆಳೆಗಳಿಗಷ್ಟೇ ಕಡಿಮೆ ಕಂದಾಯವನ್ನು ಹಾಕಿ, ಬೇಕಾದ ಸರಕುಗಳ ಮೇಲೆ ಭಾರವಾದ ತೆರಿಗೆಯನ್ನು ಹೇರಿದರೆ, ಬೇಕಾದ ಬೆಳೆಗಳೇ ಹೆಚ್ಚಬಹುದು. ಆದರೆ, ಇದು ರಾಷ್ಟ್ರದ ಆರ್ಥಿಕ ಯೋಜನೆಯ ದೃಷ್ಟಿಯಿಂದ ಯಶಸ್ಸು ಪಡೆಯುವದಿಲ್ಲ.

ಇನ್ನು ದೀರ್ಘಕಾಲದ ಆರ್ಥಿಕ ಯೋಜನೆಯ (Long time planning) ಬಗ್ಗೆ ವಿಚಾರಿಸೋಣ. ದೇಶದ ಉತ್ಪನ್ನವನ್ನು ಕೆಲವು ದಿನಗಳಲ್ಲಿ ಎರಡು ಪಟ್ಟು ಅಥವಾ ಮೂರು ಪಟ್ಟು ಬೆಳಿಸಬೇಕೆಂದು ಯೋಚಿಸಿದರೆ, ವ್ಯಕ್ತಿಕೃಷಿಯು ಉಪಯೋಗ ಬೀಳಲಾರದು. ಯಾಕಂದರೆ ತುಂಡು ತುಂಡು ಹೊಲಗಳ ಬೆಳೆಗೆ ಒಂದು ಮಿತಿಯಿದೆ.

ಉದ್ಯೋಗ—ಕೃಷಿಗಳನ್ನು ಒಂದು ಮಿತದಲ್ಲಿ ಇರಿಸಬೇಕೆಂಬ ಮಾತನ್ನೇ ವಿಚಾರಿಸಿದರೆ, ಹಿತವು ಸಾಧ್ಯವಾಗದಿದ್ದರೆ, ಬೇಸಾಯದ ಸಮಸ್ಯೆಯೇ ಹಾಳಾಗುವದು. ಇದಕ್ಕಾಗಿ ಸಹಕಾರದ ಪ್ರಯತ್ನ

ಮತ್ತು ಯೋಜನೆಬೇಕು. ಇಲ್ಲಿಯೂ ವ್ಯಕ್ತಿಗತ ಕೃಷಿಯು ತೊಡಕನ್ನುಂಟು ಮಾಡುವದು.

ನಮ್ಮ ಸಂಸ್ಕಾರಗಳನ್ನು ನೋಡಿದರೆ, ಸಾಮ್ಯವಾದದ ತಳಹದಿಯ ಮೇಲೆಯೇ ಸಮಾಜದ ಪುನರ್ಘಟನೆಯನ್ನು ಮಾಡುವದು ಅವಶ್ಯವು. ಈ ಕಾರ್ಯವು ಕೈಗೂಡಬೇಕಾದರೆ, ಬಹು ಸಂಖ್ಯಾಕರಾದ ಒಕ್ಕಲಿಗರಲ್ಲಿ ಸಾಮ್ಯವಾದವು ಸೇರ್ಪಡೆಯಾಗಬೇಕು. ಅಂದರೆ ತುಂಡಾದ ಹೊಲಗಳನ್ನೆಲ್ಲ ಒಂದುಗೂಡಿಸಿ ವಿಶಾಲವಾದ ಕ್ಷೇತ್ರದಲ್ಲಿ ಸಹಕಾರದಿಂದ ಕೃಷಿಯು ಆರಂಭವಾಗಬೇಕು. ಉದ್ಯಮಗಳ ರಾಷ್ಟ್ರೀಕರಣವನ್ನು ಮಾಡಿ, ಕೃಷಿಯನ್ನು ಈಗಿನಂತೆ ವೈಯಕ್ತಿಕ ಆಪಳಿತಕ್ಕೆ ಏಕೆ ಬಿಡಬಾರದೆಂದು ನನ್ನನ್ನು ಮೇಲಿಂದ ಮೇಲೆ ಕೇಳುತ್ತಾರೆ. ಸ್ವಲ್ಪ ವಿಚಾರಮಾಡಿದರೆ ಇದರ ಉತ್ತರವು ಅವರಿಗೇ ಹೊಳೆಯುವದು. ಒಂದು ಕಡೆಗೆ ವ್ಯಕ್ತಿವಾದ, ಇನ್ನೊಂದು ಕಡೆಗೆ, ಸಮಷ್ಟಿವಾದ. ಹೀಗೆ ದ್ವಿದಳ ಪದ್ಧತಿಯ ಆಳಿಕೆಯಲ್ಲಿ ಹಲವು ಸಂಘರ್ಷಣೆಗಳು ಉಂಟಾಗಿ, ಈ ಕುಲಗೆಟ್ಟ ಬೆರಿಕೆಯು ಸಂಘಟನೆಗೆ, ಅರ್ಧಾಂಗವಾಗುವದು. ಇದಲ್ಲದೆ, ವ್ಯಕ್ತಿ ಒಡೆತನವನ್ನು ಅಳಿಯುವದೇ ಸಾಮ್ಯವಾದದ ಬರುದು. ಇದನ್ನು ಕೈಕೊಳ್ಳದಿದ್ದರೆ, ಸ್ವಾರ್ಥ ಪರಾಯಣರಾದ, ರಾಷ್ಟ್ರದ ಹಿತವೆಂದರೇನೆಂಬುದನ್ನರಿಯದ ಲಕ್ಷಾವಧಿ ಜನಾಂಗವುಳ್ಳ ಈ ಭಾರತದಲ್ಲಿ ಸಾಮ್ಯವಾದವು ತಲೆಯೆತ್ತುವದೆಂತು ?

ಸಾಮ್ಯವಾದವು ನೆಲೆಯೂರಿ ನಿಲ್ಲಬೇಕಾದರೆ ಹಳ್ಳಿಗಳಂತೆಯೇ ಪಟ್ಟಣಗಳಲ್ಲಿಯೂ ಸಂಘ ಜೀವನವು ಬೆಳೆಯಲೇಬೇಕು. ಅಂತೂ ಯಾವ ದೃಷ್ಟಿಯಿಂದ ವಿಚಾರ ಮಾಡಿದರೂ ಭಾರತೀಯ ಕೃಷಿ ವ್ಯವಸ್ಥೆಯಲ್ಲಿ ಸಾಮ್ಯವಾದವು ಸೇರಲೇ ಬೇಕೆಂದಂತಾಯಿತು.

ಹಾಗಾದರೆ ಸಾಮ್ಯವಾದಿಯ ಒಕ್ಕಲತನವೆಂದರೇನು ? ವಿಶಾಲವಾದ ಭೂಕ್ಷೇತ್ರದಲ್ಲಿ ಸಹಕಾರ ಪದ್ಧತಿಯಿಂದ ಸಾಗುವಳಿ ಮಾಡುವದು ಹೇಗೆ ?

ಭಾರತದ ಪ್ರಾಚೀನ ಇತಿಹಾಸವನ್ನು ಸ್ವಲ್ಪ ನಿರೀಕ್ಷಿಸಿದರೆ, ಹಳೆಯ ಗ್ರಾಮ ವ್ಯವಸ್ಥೆಯು ಕಂಡು ಬರುವದು. ಅತ್ಯಂತ ಪ್ರಾಚೀನ

ಕಾಲದಲ್ಲಿ ವಿಶಾಲವಾದ ಭೂಭಾಗದಲ್ಲಿ ಈಗಿನಂತೆಯೇ ಕೆಲವು ಹಳ್ಳಿಯ ಮಾದರಿಯ ಚಿಕ್ಕ ವಸತಿಗಳಿದ್ದವು. ಅವುಗಳಲ್ಲಿ ಸಾಮೂಹಿಕ ಒಡೆತನದ ಮತ್ತು ಕೆಲಕಾಲ ಸಾಮೂಹಿಕ ಸಾಗುವಳಿಯು, ಹೊಲ ಗದೆಗಳಿದ್ದವೆಂಬುದರಲ್ಲಿ ಅನುಮಾನವಿಲ್ಲ. ಮದ್ರಾಸ ಪ್ರಾಂತದಲ್ಲಿ ನೊನ್ನೆ ನೊನ್ನೆಯವರೆಗೂ ಅಂತಹ ಹಳ್ಳಿಗಳಿದ್ದವು. ಪ್ರಾಚೀನ ಆರ್ಯರ ಈ ಪದ್ಧತಿಯು ತತ್ವಕ್ಕನುಸರಿಸಿಯೇ ಸಾಮ್ಯವಾದದ ಆದರ್ಶವಿರುವದು. ಸಾಮ್ಯವಾದದ ಮೇರೆಗೆ ನಿರ್ಮಾಣವಾಗುವ ಕೃಷಿಯ ಹಳ್ಳಿಯು ಸ್ವತಂತ್ರವಾದ ಒಂದು ಚಿಕ್ಕ ಆರ್ಥಿಕಘಟಕವಿರದೆ, ಅಖಂಡ ರಾಷ್ಟ್ರದ ಆರ್ಥಿಕ ಯೋಜನೆಯಲ್ಲಿ ಸಹಕರಿಸುವ ಒಂದು ಅಂಗವಾಗಿರುವದು.

ಸದ್ಯಕ್ಕೆ ರಶಿಯಾದಲ್ಲಿ ಮಾತ್ರ ಸಾಮ್ಯವಾದವು ರೂಪಗೊಳ್ಳುತ್ತಿದೆ. ಅಲ್ಲಿಯ ಸಾಗುವಳಿಯು ಸಾಮ್ಯವಾದದ ತತ್ವಗಳ ಮೇಲೆ ಅತ್ಯಂತ ನಿಷ್ಠೆಯಿಂದ ಸಾಗಿದೆ. ಅದರ ಈ ಪ್ರಯತ್ನವು ಸಾಮ್ಯವಾದದ ಗೆಲುವನ್ನು ಸೂಚಿಸುತ್ತದೆ. ರಶಿಯಾದ ಪರಿಸ್ಥಿತಿಯೂ ನಮ್ಮಂತೆಯೇ ಇದೆ. ಅಲ್ಲಿಯ ಒಕ್ಕಲತನವೂ ಬಹಳ ಹಿಂದೆ ಉಳಿದದ್ದು, ಪ್ರಾಥಮಿಕ ತರಗತಿಯದು, ಪರಂಪರಾ ಪ್ರಧಾನವಾದದ್ದು. ಸ್ವಾರ್ಥ ಅಜ್ಞಾನ ಆಲಸ್ಯಗಳಿಂದ ತುಂಬಿದ ಒಕ್ಕಲಿಗರುಳ್ಳದ್ದು. ಆದರೆ ಸಾಮ್ಯವಾದವು ಎಲ್ಲವನ್ನೂ ಉದ್ಧರಿಸಿ ತನ್ನ ಪ್ರಭಾವವನ್ನು ಬೀರಿದೆ. ಅಲ್ಲಿ ಈಗ ಮೂರು ಬಗೆಯ ಸಾಮ್ಯವಾದದ ಸಾಗುವಳಿಗಳು ತಲೆಯೆತ್ತಿವೆ.

ಅಲ್ಲಿ ಕಂಡುಬರುವ ಸಹಕಾರ ಪದ್ಧತಿಯ ಸಾಗುವಳಿಯು ಸಾಮ್ಯವಾದದ ದೃಷ್ಟಿಯಿಂದ ಕೀಳು ತರಗತಿಯದು. ಈ ವ್ಯವಸ್ಥೆಯಲ್ಲಿ ವ್ಯಕ್ತಿ ಒಡೆತನವು ಜೀವಂತವಿದೆ. ಆದರೆ, ಶ್ರೀಮಂತರ, ಜಮೀನದಾರರ ಭೂಮಿಗಳು ಮಾತ್ರ ಹಂಚಲ್ಪಟ್ಟು ಒಂದು ಬಗೆಯ ಸಮಾನತೆಯು ತಲೆದೋರುವದು. ಕೃಷಿಯ ಸಾಮಗ್ರಿಗಳಾದ, ಕುದುರೆ ಎತ್ತು ರೆಂಟೆ ಮುಂತಾದವುಗಳು ಸ್ವಂತ ಸೊತ್ತಾಗಿ ಉಳಿಯುವವು. ಆದರೆ ಸಾಗುವಳಿಯು ಮಾತ್ರ ಸಾರ್ವಜನಿಕವಾಗಿ ನಡೆಯುವದು. ಎಲ್ಲರೂ ಕೂಡಿ ಸಾಗುಮಾಡುವರು. ಆದ ವೆಚ್ಚವನ್ನು ಹುಟ್ಟುವಳಿಯಿಂದ ಕಳೆದು

ಉಳಿದದ್ದನ್ನು ಆಯಾ ಹೊಲಗಳ ವಿಸ್ತಾರ, ಅವರ ದುಡಿತ ಇವುಗಳ ಮೇಲೆ ಹಂಚಿಕೊಳ್ಳುವರು.

ಇದು ಸಾಮ್ಯವಾದೀ ಜೀವನದಲ್ಲಿಯ ಮೊದಲನೇ ಪಾಠ. ಇದು ಸಂಘ ಬುದ್ಧಿಯನ್ನು ಬೆಳೆಯಿಸುವದು, ಹುಟ್ಟುವಳಿಯನ್ನು ಹೆಚ್ಚಿಸುವದು. ಒಕ್ಕಲಿಗರಲ್ಲಿ ಸಂಘ ಜೀವನವನ್ನುಂಟುಮಾಡಿ ವಿಶಾಲ ದೃಷ್ಟಿಯನ್ನು ಕೊಡುವದು. ಬಂಧು ಭಾವವು ಬೆಳೆಯತೊಡಗುವದು. ಇದರಿಂದ ಸಾಮ್ಯವಾದದ ಮನೋಭೂಮಿಕೆಯು ಸಿದ್ಧವಾಗುವದು.

ಸಾಂಘಿಕ ಒಕ್ಕಲತನವನ್ನು ಕೈಕೊಳ್ಳುವದು ಎರಡನೇ ಮೆಟ್ಟಲು. ಇಲ್ಲಿ ವ್ಯಕ್ತಿ ಒಡೆತನವು ಉಳಿದಿರುವದಿಲ್ಲ. ಹುಟ್ಟುವಳಿಯು ಹಂಚುವಿಕೆಯು ಮಾತ್ರ ಅವರವರ ಶ್ರಮವನ್ನು ಅನುಲಕ್ಷಿಸಿ ರಾಷ್ಟ್ರೀಯ ದೃಷ್ಟಿಯಿಂದ ಸಾಗಿಸಲಾಗುವದು. ಇದೂ ಅಲ್ಲದೆ, ಶ್ರಮಕ್ಕಿಂತಲೂ ಅಗತ್ಯದ ಕಡೆಗೆ ಲಕ್ಷ್ಯವಿಟ್ಟು ಹಂಚಲಾಗುವದು. ಈ ಸಾಂಘಿಕ ಸಾಗುವಳಿ (collective farming)ಯು ಘಟಕವಾದ ಹಳ್ಳಿಯ ಜೀವನದಲ್ಲಿ ಕೂಡ ಜೀನಾಯದ ಸಾಧನಗಳು ವ್ಯಕ್ತಿಯ ಸೊತ್ತಾಗಿ ಉಳಿಯಬಲ್ಲವು. ಈ ಮೇರೆಗೆ ಜೀವನವು ಹೆಚ್ಚು ಹೆಚ್ಚು ಸಾಂಘಿಕವಾಗಹತ್ತಿದೆ. ಆದರೂ ಇನ್ನೂ ಪೂರ್ಣವಾಗಿಲ್ಲ. ಈ ಹೆಜ್ಜೆಯನ್ನು ದಾಟಿದೊಡನೆಯೇ ಸಂಘವಾದದ (communic) ಉದಯ. ಇಲ್ಲಿ ಅತ್ಯಂತ ಹೆಚ್ಚು ಪ್ರಮಾಣದ ಸಂಘಜೀವನ.

ಸಾಮ್ಯವಾದದ ಬೆಳಕಿನಲ್ಲಿ ನಡೆದ ರಶಿಯದ ಈ ಕೃಷಿಕ್ರಾಂತಿಯನ್ನುದ್ದೇಶಿಸಿ, ಡಾ. ಶೆರವುಡ್ ಎಡಿಯವರು ತಮ್ಮ ಇತ್ತೀಚಿನ ಒಂದು ಗ್ರಂಥದಲ್ಲಿ ಈ ರೀತಿಯಾಗಿ ಉಲ್ಲೇಖಿಸಿದ್ದಾರೆ:—

**“ ಇಂದು ರಶಿಯದ ಸಾಮ್ಯವಾದಿ ಸಮಾಜವು ಜಗತ್ತು ಈ ವರೆಗೆ ಕಾಣದ ಕೃಷಿಕ್ರಾಂತಿಯ ಮಡಲಿನಲ್ಲಿದೆ. ಹಿಂದುಳಿದ ಕೃಷಿಶ್ರಮ, ಮತ್ತು ಗ್ರಾಮ-ನಗರಗಳ ಸಂಬಂಧದ ಭೇದ, ಎಂಬ ಪ್ರಮುಖ ಸಮಸ್ಯೆಯು ರೋಮನ್ ಸಾಮ್ರಾಜ್ಯದ ಪತನಕಾಲದಿಂದ ಇಂದಿಗೂ ಇದೆ. ಮೊದಲಿನ ನಾಲ್ಕು ವರ್ಷ ರಶಿಯನ್ನರು ಪ್ರಾಥಮಿಕ ವರ್ಗದ ಕೃಷಿಪದ್ಧತಿಯುಳ್ಳ ದೇಶವನ್ನು ಆಧುನಿಕ-ಔದ್ಯೋಗಿಕ ರಾಷ್ಟ್ರವನ್ನಾಗಿ ಮಾಡಲು ಪ್ರಯತ್ನಿಸಿದರು. ಜನರ ವಾಸಕ್ಕೆ ಯೋಗ್ಯ**

ವಾದ ಭೂಭಾಗದ ಒಂದಾರಾಂಶ ಭಾಗದಲ್ಲಿ ಸುಮಾರು ೧೦ ಕೋಟಿ ಒಕ್ಕಲಿಗರು ಇರುವಲ್ಲಿ ದೇಶದ ತುಂಡು ಹೊಲಗಳನ್ನೆಲ್ಲ ಜೋಡಿಸಿ, ದೊಡ್ಡ ಪ್ರಮಾಣದ ಸಾಂಘಿಕ ಕ್ಷೇತ್ರಗಳನ್ನಾಗಿ ವಿಭಾಗಿಸಿ, ಯಾಂತ್ರಿಕ ಸಾಧನೆಗಳಿಂದ ಸಾಗುವಳಿ ಮಾಡಿ, ಅವುಗಳ ಮೇಲೆ ಸಾಮಾಜಿಕ ಒಡೆತನವನ್ನು ನಡೆಯಿಸುವದೆಂದರೆ, ಸಾಮಾನ್ಯ ಕಾರ್ಯವಲ್ಲ. ಆದರೆ ಈ ಅಸಾಧ್ಯವೆಂದು ತೋರುವ ಕಾರ್ಯವನ್ನು ಕೊನೆಗಾಣಿಸಿದರೆಂದೇ ಹೇಳಬೇಕು. ಗ್ರಾಮಗಳ ಸಮಸ್ಯೆಯು ಪರಿಹಾರ ವಾಯಿತು. ರಶಿಯನ್ನರು ಒಕ್ಕಲಿಗರ ನೆರವಿನಿಂದ ಈ ಕೃಷಿಸಂಗ್ರಾಮವನ್ನುಹೂಡಿ ವಿಜಯಶಾಲಿಗಳಾಗಿರುವರು. ಇನ್ನು ರಶಿಯ ದೇಶವು ಈ ಸಾಂಘಿಕ ಪದ್ಧತಿ ಯಿಂದ (collect vization) ಎಂದೂ ಹಿಂದಿರುಗದು.

ಇದಕ್ಕಿಂತ ಪೂರ್ವದಲ್ಲಿ ಭೂಕ್ಷುಧೆಯುಳ್ಳ ಗುಪ್ತಧನವನ್ನು ಕಾಯ್ದು ಕೊಂಡ ೨ ಕೋಟಿ ವೈಯಕ್ತಿಕ ಒಕ್ಕಲಿಗರು ಸಾಮ್ಯವಾದವನ್ನು ಪ್ರತಿಭಟಿಸು ತ್ತಿದ್ದರು.

ಒಂದು ಕಾಲಕ್ಕೆ ಇವರು ಸಾಮ್ಯವಾದದ ವಿರುದ್ಧ ಬಂಡು ಹೂಡಿ ಅದನು ಕಿತ್ತೊಗೆಯುವರೆಂಬ ಭೀತಿಯೂ ಇತ್ತು. ಔದ್ಯೋಗಿಕ ಕೆಲಸಗಾರರ ತರು ವಾಯ ಒಕ್ಕಲಿಗರೇ ಈಗ ಹೆಚ್ಚಿನ ಪ್ರಮಾಣದಲ್ಲಿ ಸಾಮ್ಯವಾದಕ್ಕೆ ಸೇರಿದವರು. ಈ ಮಹಾಕಾರ್ಯವನ್ನು ಸಾಧಿಸುವದರಲ್ಲಿ ಅನೇಕ ಬಗೆಯ ತಪ್ಪುತಡೆಗಳಾಗಿರ ಬಹುದು. ಎಷ್ಟೋ ತಪ್ಪುಗಳಾಗಿದ್ದರೂ ಇದನ್ನು ಇತಿಹಾಸದಲ್ಲಿ ಮಹಾಸಿದ್ಧಿ ಯೆಂದೇ ಉಲ್ಲೇಖಿಸುವರು. " ಎಂದು ಬರೆದಿರುವರು.

ರಶಿಯಾದಲ್ಲಿ ಸಾಮ್ಯವಾದವು ಸಿದ್ಧಿಯನ್ನು ಪಡೆಯಿತು. ನಮ್ಮಲ್ಲಿ ಏಕೆ ಸಾಧ್ಯವಾಗಬಾರದೆಂಬುದೇ ನಮ್ಮ ಪ್ರಶ್ನೆ. ನಮಗೆ ನೆರವೇರಿಸಲು ಬಾರದ ಯಾವ ಮಾತು ಇದರಲ್ಲಿದೆ? ಅವರಿಗಿಂತಲೂ ನಮ್ಮ ಸಂಸ್ಕೃತಿಯು ಕಡಿಮೆಯೆ?

"ಸಹನಾವವತು" ಮೊದಲಾದ ನಮ್ಮ ಉಪನಿಷತ್ತುಗಳು ಏನನ್ನು ಸಾರುತ್ತವೆ?

ರಶಿಯದವರಂತೆ ನಾವು ಅವಸರಪಡುವದು ಬೇಡ. ಸಾವಕಾಶ ವಾಗಿ ಸಾಗೋಣ. ಅನ್ಯಾಯ ಅತ್ಯಾಚಾರಗಳಾಗದಂತೆ ಜಾಗೃತಿ ಯಿಂದ ಮುಂದೆ ನಡೆಯೋಣ. ಸಹಕಾರದ ಸಾಂಘಿಕ ಕೃಷಿಪದ್ಧತಿಗೆ, ಅದರ ಬೆಳವಣಿಗೆಗೆ, ತಕ್ಕ ಉತ್ತೇಜನೋತ್ಸಾಹಗಳನ್ನು ಕೊಡಬೇಕೆಂ

ಬುದೇ ಸಾಮ್ಯವಾದಿಗಳ ಬಯಕೆ. ಶಿಕ್ಷಣ ಪ್ರಚಾರ ಕಾರ್ಯ, ಪ್ರದ-ರ್ಶನ, ಧನಸಹಾಯ, ಪ್ರೋತ್ಸಾಹಕರವಾದ ಕಂದಾಯ ಇವುಗಳಿಂದ ಸಾಧಿಸಬೇಕೆಂಬುದೇ ನಮ್ಮ ಅಪೇಕ್ಷೆ.

ಶ್ರಮವನ್ನುಳಿಸುವ ಯಾಂತ್ರಿಕ ಕೃಷಿಸಾಧನಗಳನ್ನು ನಾವು ಕಡಿಮೆ ಉಪಯೋಗಿಸಬಹುದು. ಯಾಕಂದರೆ ನಮ್ಮಲ್ಲಿ ಮನುಷ್ಯ ಬಲವು ಸಾಕಷ್ಟು ಇದ್ದು, ರಶಿಯದಷ್ಟು ಭೂಮಿಯೂ ಇಲ್ಲಿರುವದಿಲ್ಲ. ಮಂದೆಯೂ ಪ್ರಗತಿಪರವಲ್ಲದ ಈಗಿನ ಕುಂಟೆ ರಂಟೆಗಳನ್ನೇ ಉಪ ಯೋಗಿಸಬೇಕೆಂದಲ್ಲ. ನಿರುದ್ಯೋಗಿಗಳಿಗೆಲ್ಲ ಉದ್ಯೋಗ ದೊರೆಯುವ ವರೆಗೆ, ದೊಡ್ಡ ದೊಡ್ಡ ಕೊಯ್ಯುವ, ಕಟ್ಟುವ ಯಂತ್ರಗಳು ನಮಗೆ ಬೇಕಾಗಿಲ್ಲ. ಹಳ್ಳಿಗಳಿಗೆ ಮೊದಲು ವಿದ್ಯುತ್ತಿನ ದೀಪಗಳನ್ನು ಪೂರೈಸು ವೆವು. ವಾಹನದ ಅನುಕೂಲತೆಯನ್ನುಂಟುಮಾಡುವೆವು. ಶಿಕ್ಷಣಾಲಯ ಗಳನ್ನು ತೆರೆಯುವೆವು. ರೇಡಿಯೋಗಳ ಮುಖಾಂತರ ಜಗತ್ತಿನ ಅರಿ ವನ್ನುಂಟುಮಾಡುವೆವು.

ರಶಿಯಾದಲ್ಲಿ ಆದ ತಪ್ಪುಗಳು ನಮ್ಮಿಂದ ಆಗದಂತೆ ನಾವು ಎಚ್ಚರ ಪಡಬೇಕು. ಬುದ್ಧಿವಂತಿಕೆಯಿಂದ ಎಚ್ಚರವುಳ್ಳವರಾಗಿ ನಾವು ಕಾರ್ಯ ತತ್ಪರರಾಗಬೇಕು. ಅಂದರೆ, ಅವುಗಳನ್ನು ನಾವು ಸುಲಭವಾಗಿ ಎದು ರಿಸಬಹುದು. ಕಾರ್ಯವಾದ ಬಳಿಕ ಬೊಟ್ಟುಮಾಡಿ ತೋರಿಸುವದರಲ್ಲಿ ಅರ್ಥವಿಲ್ಲ. ತೆಗಳುವದು ಬಹು ಸುಲಭ. ರಶಿಯನ್ನರು ತಮ್ಮ ತಪ್ಪು ಗಳನ್ನು ಎಲ್ಲರಿಗಿಂತಲೂ ಮೊದಲೇ ಕಂಡುಕೊಂಡಿರುವರು. ಆ ತಪ್ಪು ಗಳನ್ನು ಅವರು ಬುದ್ಧಿಪೂರ್ವಕವಾಗಿ ಮಾಡಿದ್ದಲ್ಲ. ಪ್ರಯೋಗಶಾಲೆ ಯಲ್ಲಿ ಕೂಡ ಎಲ್ಲ ಸಾಹಿತ್ಯಗಳು ಸಿದ್ಧವಿರುವಾಗ ತಪ್ಪುಗಳಾಗುತ್ತವೆಂದ ಮೇಲೆ, ೧೦ ಕೋಟಿ ಜನರುಳ್ಳ ಭೂವಿಸ್ತಾರದಲ್ಲಿ ನಡಿಯುವ ಪ್ರಯೋಗ ದಲ್ಲಿ ಪ್ರಮಾದಗಳಾದರೆ ಆಶ್ಚರ್ಯವೇನು ? ಹಿಂದಿನ ಅನುಭವದಿಂದ ಮುಂದಿನ ಮಾರ್ಗದಲ್ಲಿ ಅವು ಕಡಿಮೆಯಾಗುವಂತೆ ಎಚ್ಚರ ತೆಗೆದು-ಕೊಳ್ಳುವದೇ ಮಾನವನ ಬುದ್ಧಿಯ ಉಪಯೋಗ.

ಆದರೆ ಈ ತಪ್ಪುಗಳು ಸಾಮ್ಯವಾದದ ಸಿದ್ಧಿಯನ್ನು ಅಲ್ಲಗಳೆಯ ಲಾರವು. ನಮಗೆ ಬೇಕಾದುದು ಅದು. ರಶಿಯಾದಿಂದ ನಾವು ಕಲಿಯ

ಬೇಕಾದದ್ದು ಅವರ ಕಳಕಳಿ, ತತ್ವನಿಷ್ಠೆ, ಸಾಮ್ಯವಾದದ ಸಿದ್ಧಿಯ ರೀತಿ. ರಶಿಯಾದವರು ಧೈರ್ಯದಿಂದ ಅನುಷ್ಠಾನ ಮಾಡುತ್ತಿರುವ ನವಜೀವನದ ಮಹಾ ತತ್ವವೊಂದನ್ನೇ ನಾವು ಇಂದು ಸಾಧಿಸಬೇಕಾಗಿದೆ.

ಹೊಲಗಳನ್ನು ಸಹಕಾರದಿಂದ ಸಾಗಿಸಿದರೆ, ಹಳ್ಳಿಗರಿಗೆ ದಾರಿದ್ರ್ಯ ನಿವಾರಣೆಯ ಒಂದು ವರವೇ ದೊರೆತಂತಾಗುವದು. ಹೊಲಗಳ ಮೇಲೆ ಸಾಂಘಿಕ ಒಡೆತನವಿದ್ದರಂತೂ ಅವರ ಸುಖಕ್ಕೆ ಮೇರೆಯೇ ಇಲ್ಲ. ಸಾಮ್ಯವಾದದ ಈ ಕೃಷಿಪದ್ಧತಿಯು ಹಳ್ಳಿಯ ಜೀವನದಲ್ಲಿ ಒಂದು ದಾದರೆ, ಅವರು ದೀನಸ್ಥಿತಿಯಿಂದ ಮುಕ್ತರಾಗಿ, ಭಾರತದ ಇತಿಹಾಸದಲ್ಲಿ ಹಿಂದೆ ಎಂದೂ ಕಾಣದ ನಾಗರಿಕತೆ ಮತ್ತು ಸುಖಗಳನ್ನು ಪಡೆಯುವರೆಂಬುದರಲ್ಲಿ ಎಳ್ಳಷ್ಟು ಸಂಶಯವಿಲ್ಲ.

**೧೦. ರಾಷ್ಟ್ರವು ಪ್ರಜೆಗಳಿಗೆ ಉದ್ಯೋಗವನ್ನೊದಗಿಸಿಕೊಡಬೇಕು. ಅಥವಾ ಅವಶ್ಯ ಉಪಜೀವನವನ್ನು ಕೊಡಬೇಕು—** ಬಂಡವಲವಾದದ ರಾಷ್ಟ್ರಗಳಲ್ಲಿ ಅಥವಾ ಅದಕ್ಕಿಂತ ಮುಂಚಿನ ರಾಜ್ಯಗಳಲ್ಲಿ ಉದ್ಯೋಗವು ಸಿಕ್ಕೇ ಸಿಗುವದೆಂಬ ಭರವಸೆಯು ಇರಲಿಲ್ಲ. ಅದರಿಂದ ಜೀವನದ ಸುರಕ್ಷಿತೆಯ ಬಗ್ಗೆ ಅವರು ಯಾವಾಗಲೂ ಹಹಪಡಿಸಬೇಕಾಗುತ್ತಿತ್ತು. ಮೊದಮೊದಲು ಭೂಮಿಯ ಸಾಗುವಳಿಯು ಹೆಚ್ಚಾಗಿ ಆಗದಿದ್ದಾಗ ಈ ಪ್ರಶ್ನೆಯೇ ಇರಲಿಲ್ಲ. ತನ್ನ ರಟ್ಟೆಮುರಿದು, ಬಾಳುತ್ತಿದ್ದನು. ಸಾಗುವಳಿಯು ಹೆಚ್ಚಾದಂತೆ, ಭೂಮಿಯು ಸಾಲದಾಯಿತು. ಕಳವು ಸುಲಿಗೆಗಳನ್ನು ಮಾಡುವವನು ನ್ಯಾಯಾಸನದ ಎದುರಿಗೆ ಎಳೆಯಲ್ಪಡುತ್ತಿದ್ದನು.

ಔದ್ಯೋಗಿಕ ಯುಗವು ಪ್ರಾರಂಭವಾದಂದಿನಿಂದ ಈ ನಿರುದ್ಯೋಗ ಸಮಸ್ಯೆಯು ಎಂದಿಗಿಂತಲೂ ಇಂದು ಭೀಕರವಾಗಿದೆ. ದುಡಿಯುತ್ತೇನೆ, ದುಡಿಯುತ್ತೇನೆ ಎಂದು ಹಲುಬಿದರೂ ದುಡಿತ ಸಿಕ್ಕದೆ, ಮುಷ್ಟಾನ್ನಕ್ಕಾಗಿ ಮೊರೆಯಿಡುವವರ ಗೋಳನ್ನು ನೋಡಲಾಸಲ್ಲ.

ಇತ್ತೀಚೆಗೆ ಕೂಲಿಕಾರರಲ್ಲಿಯೂ ಜಾಗೃತೆಯಾಗಿ, ಅವರು ತಮ್ಮ ಉದ್ಧಾರಕ್ಕಾಗಿ ಹೋರಾಡಹತ್ತಿದ್ದಾರೆ. ಔದ್ಯೋಗಿಕ ಮುಗ್ಗಟ್ಟು

ಗಳು ನಿರುದ್ಯೋಗತನವನ್ನು ಎತ್ತಿ ತೋರಿಸಿದವು. ಆಗ ರಾಷ್ಟ್ರಗಳು ಈ ಪ್ರಶ್ನೆಯನ್ನು ವಿಚಾರಿಸಲೇ ಬೇಕಾಯಿತು. ಕೆಲವು ರಾಷ್ಟ್ರಗಳು, ನಿರುದ್ಯೋಗ ವಿಮೆಯನ್ನು ಏರ್ಪಡಿಸಿದವು ನಮ್ಮ ಭಾರತದಲ್ಲಿ ಸಾಮ್ರಾಜ್ಯವಾದದ ಪ್ರಭಾವದಿಂದ ಉದ್ಯೋಗ ಕೃಷಿಗಳೆರಡೂ ನೆಲ ಹಿಡಿದಿವೆ. ನಿರುದ್ಯೋಗವು ಅತ್ಯಂತ ಉಗ್ರರೂಪವನ್ನು ತಾಳಿದೆ. ನ್ಯಾಯ ವಿವೇಕವುಳ್ಳ ಯಾವುದೇ ರಾಜ್ಯಘಟನೆಯು, ಕೋಟ್ಯಾವಧಿ ಜನರು ಬರಿ ಹೊಟ್ಟೆಯಿಂದ ಬಳಲುವದನ್ನು ಎಂದೂ ಸಹಿಸಲಿಕ್ಕಿಲ್ಲ. ಸಾಮ್ಯವಾದವು ಈ ಪರಿಸ್ಥಿತಿಯನ್ನು ಎಂದೂ ತಾಳಲಾರದು. ಜನತೆಯ ಉದ್ಯೋಗದ ಅಥವಾ ಉಪಜೀವನದ ವ್ಯವಸ್ಥೆಯನ್ನು ಮಾಡು ವದು ಪ್ರತಿಯೊಂದು ರಾಷ್ಟ್ರದ ಕರ್ತವ್ಯವಾಗಿದೆ. ಭಾರತದಲ್ಲಿ ಸಾಮ್ಯ ವಾದೀ ಸರಕಾರವು ಸ್ಥಾಪಿತವಾದರೆ, ಜನರ ಉಪಜೀವನದ ಪ್ರಶ್ನೆ ಯನ್ನು ಮೊದಲು ಬಿಡಿಸುವದು. ಈ ಅಭಿವಚನವನ್ನು ಜನತೆಗೆ ಮೊದಲೇ ಕೊಡುವದು.

೧೧ **ಪ್ರತಿಯೊಬ್ಬನಿಗೆ ಅವನ ಶಕ್ತಿಯಂತೆ ದುಡಿತ ಕೊಟ್ಟು, ಆತನ ಆಗತ್ಯಗಳನ್ನು ಪೂರೈಸುವದು—** ಇದೇ ಸಾಮ್ಯವಾದದ ಕೊನೆಯ ಗುರಿಯು. ಇದರ ಅರ್ಥವಿಷ್ಟೆ. ಸಾಮ್ಯವಾದವು ಪೂರ್ಣ ವಾಗಿ ಜೀವನದಲ್ಲಿ ಬಂದರೆ, ಪ್ರತಿಯೊಬ್ಬನು ತನ್ನ ಶಕ್ತಿಯಿದ್ದಷ್ಟು ಸಮಾಜಕ್ಕಾಗಿ ದುಡಿಯುವನು. ಕಾರಖಾನೆ, ಹೊಲ, ಕಸೂರಶಾಲೆ, ಶಾಲೆಗಳು, ಪ್ರಯೋಗಾಲಯಗಳು ಮೊದಲಾದವುಗಳಲ್ಲೆಲ್ಲ ಮನು ಷ್ಯನು ತನ್ನ ಶಕ್ತಿಯಂತೆ ದುಡಿಯುವನು. ಮತ್ತು ಒಟ್ಟು ಹುಟ್ಟು ವಳಿಯಲ್ಲಿ ತನಗೆ ಅಗತ್ಯವಾದ ವಸ್ತುಗಳನ್ನು ಪಡೆಯುವನು. ಅಂದರೆ ಒಬ್ಬನು ಮೋಟರು ಕಾರಖಾನೆಯಲ್ಲಿ ದುಡಿಯುತ್ತಿದ್ದರೆ, ಅವುಗಳನ್ನೇ ಬೇಕಾದಷ್ಟು ಪಡೆದು ಬಾಳುವನೆಂದು ಇದರ ಅರ್ಥವಲ್ಲ. ಇವುಗಳಿಂದ ಅವನಿಗೇನು ಪ್ರಯೋಜನ! ಅಲ್ಲದೆ ಅವುಗಳ ಮಾರಾಟಕ್ಕೆ ಪೇಟೆಯೂ ಇರುವದಿಲ್ಲ. ತನ್ನ ಅವಶ್ಯಕತೆಗೆ ತಕ್ಕಷ್ಟು ತೆಗೆದುಕೊಳ್ಳುವದೆಂದರೆ, ಅನ್ನ, ವಸ್ತ್ರ, ಪುಸ್ತಕ ಮುಂತಾದ ಉಪಜೀವನಕ್ಕೆ ಬೇಕಾದ ವಸ್ತು

ಗಳನ್ನು. ಆಗ ಹಣವಿಲ್ಲ. ಕೂಲಿಯಿಲ್ಲ. ಹೆಚ್ಚಿನವರು ಕಡಿಮೆಯವರು ಎಂಬ ಭೇದವಿಲ್ಲ.

ಸಾಮ್ಯವಾದವು ಚರಮ ಸೀಮೆಯನ್ನು ಮುಟ್ಟಿದಾಗ ಹೀಗಾಗುವದೆಂದು ತಿಳಿಯಬೇಕು. ಆಗ ಜೀವನಕ್ಕೆ ಬೇಕಾದ ವಸ್ತುಗಳ ವಿಪುಲತೆ ಇರುವದು. ಪ್ರತಿಯೊಬ್ಬನ ಬಳಿಕೆಗೆ ಬೇಕಾದ ವಸ್ತುಗಳು ಸಿದ್ಧವಾಗಿರುತ್ತವೆ. ಆದರೆ ರಾಷ್ಟ್ರವು ಈ ಸ್ಥಿತಿಯನ್ನು ಮುಟ್ಟುವವರೆಗೆ ಮಾತ್ರ ಕೆಲವು ನಿರ್ಬಂಧಗಳನ್ನು ಹಾಕಬೇಕಾಗುವದು. ಒಬ್ಬನಿಗೆ ಇಂತಿಷ್ಟೇ ಎಂದು ಗೊತ್ತುಮಾಡಬೇಕಾಗುವದು.

ಇದು ಸ್ವಪ್ನ ಸೃಷ್ಟಿಯು ವ್ಯವಹಾರವಲ್ಲ. ಹುಟ್ಟುವಳಿಯು ಹೆಚ್ಚಿದ್ದಾಗ ಕೂಡ ಇದು ಹೇಗೆ ಶಕ್ಯವೆಂದು ಕೆಲವರಿಗೆ ಶಂಕೆ. ಇದು ವ್ಯವಹಾರ ಜ್ಞಾನದ ಸಾಮಾಜಿಕ ಮನೋಗತಿಯ ಪ್ರಶ್ನೆ. ಸಾಮಾಜಿಕ ಪರಿಸ್ಥಿತಿಯ ಒನಲಾವಣೆಯ ಪ್ರಭಾವದಿಂದ ಒಂದು ನೂತನ ಮಾನವ ಸ್ವಭಾವವು ಉಂಟಾಗುವದು. ಆಗ ಸ್ವಾರ್ಥವು ಪಾಪವೆಂದಿಷ್ಟೇ ಅಲ್ಲ ಮಹಾಪರಾಧವೆಂದು ತಿಳಿಯಲ್ಪಡುತ್ತದೆ, ಎಂಬುದನ್ನು ಲಕ್ಷ್ಯದಲ್ಲಿಡಬೇಕು. ಸಾಮ್ಯವಾದೀಯ ರಶಿಯಾದಲ್ಲಿ ಕಳವು ಮಾಡುವವರನ್ನು ಗುಂಡಿಗೆ ಗುರಿಮಾಡುವರು. ಸಾಮಾಜಿಕ ಸೊತ್ತೆಂದರೆ ಅಷ್ಟೊಂದು ಪವಿತ್ರವೆಂಬ ಭಾವನೆ.

ಈ ಹೊಸ ಜೀವನದಲ್ಲಿ ಈ ತತ್ವವು ವ್ಯವಹಾರ್ಯವೋ ಅವ್ಯವಹಾರ್ಯವೋ ನೋಡೋಣ. ಜನರಿಗೆ ಮನಸ್ಸಿಗೆ ಬಂದನ್ನು ತೆಗೆದುಕೊಳ್ಳುವ ಅವಕಾಶ ಸಿಕ್ಕರೆ, ಅವರು ಈ ಸ್ವಾತಂತ್ರ್ಯದ ದುರುಪಯೋಗವನ್ನು ಮಾಡುವರೆಂದು ಕೆಲವರ ಆಕ್ಷೇಪ. ಆದರೆ ಇದು ಯಾವಾಗ? ಅವರು ಇರುವ ಸಮಾಜದ ಪರಿಸ್ಥಿತಿಯನ್ನು ನಾವು ಮೊದಲು ತಿಳಿದುಕೊಳ್ಳಬೇಕು. ಉದ್ಯೋಗ ಉಪಜೀವನಗಳಿಗೆ ಅಲ್ಲಿ ಪೂರ್ಣ ಅನುಕೂಲವಿರುವದು. ಮುಪ್ಪು, ಬೇನೆ ಬೇಸರಿಕೆಗಳಿಗೆ, ಹೇಡಿಗೆ ತಕ್ಕ ವ್ಯವಸ್ಥೆಯಿರುವದು. ವ್ಯಕ್ತಿಗೆ ಯಾವ ಕೊರತೆಯೂ ಚಿಂತೆಯೂ ಇರುವದಿಲ್ಲ. ತನ್ನ ಕೆಲಸವನ್ನು ಸರಿಯಾಗಿ ಮಾಡಿ ಸೈ ಎನಿಸಿಕೊಂಡರೆ

ತೀರಿತು. ಆ ಸಮಾಜದಲ್ಲಿ ಸರಕುಗಳ ಮಾರಾಟವಿಲ್ಲ. ಜೀವನಕ್ಕೆ ಬೇಕಾಗುವ ಸರಕುಗಳನ್ನು ನಿರ್ಮಿಸಿ ಹಂಚಿಕೊಳ್ಳಲಾಗುವದು. ಮುತ್ತು ರತ್ನಗಳಂತಹ ಆಭರಣಗಳನ್ನು ಹೊರ್ತುಪಡಿಸಿ, ಯಾವ ವಸ್ತುಗಳನ್ನೂ ವಂಚನೆಯಿಂದ ಪರದೇಶಗಳಿಗೆ ಕಳಿಸುವದಿಲ್ಲ. ಸಾಮ್ಯವಾದೀಯ ಸರಕಾರದಲ್ಲಿ ಸಾಕಷ್ಟು ರತ್ನಾಭರಣಗಳು ಸಿಕ್ಕುತ್ತವೆಂದು ಹೇಳುವದು ಕಠಿಣ. ಇಂತಹ ಸಮಾಜದಲ್ಲಿ ಸಂಗ್ರಹಿಸುವ ಚಪಲವೇಕೆ? ಸಂಪೂರ್ಣ ಸುರಕ್ಷತೆಯು ಸಂಸ್ಕಾರಗಳೂ ಹಾಗು ಸಾಮಾಜಿಕ ಸಂಗತಿಯ ಜ್ಞಾನವು ಅವರಲ್ಲಿಯ ಸಂಗ್ರಹ ಬುದ್ಧಿಯನ್ನು ಹೋಗಲಾಡಿಸುವದು.

ಮೊದಲೇ ಹೇಳಿದಂತೆ ಸಮಾಜವು ಈ ಹಿಟ್ಟಲಿಗೆ ಮುಟ್ಟುವ ವರೆಗೆ ಮಾತ್ರ, ಕೆಲ ನಿರ್ಬಂಧಗಳನ್ನು ಹಾಕಲಾಗುವದು. ಅಲ್ಲಿಯ ವರೆಗೆ ಹಣವೆಂಬುದು ಉಳಿಯುವದು. ಕೂಲಿಯೂ ಇರುವದು. ಕೂಲಿ ಯೆಂದರೆ ಸರಕುಗಳನ್ನು ಕೊಳ್ಳುವ ಶಕ್ತಿ. ಉತ್ಪಾದನವು ಬೆಳೆದಂತೆ ಕೂಲಿಯೂ ಬೆಳೆಯುವದು. ಕೊನೆಗೆ ಸಾಮ್ಯವಾದದ ಸಿದ್ಧಿ.

೧೨. **ಶ್ರಮಜೀವನದ ತತ್ವಕ್ಕನುಸರಿಸಿ ಪ್ರತಿಷ್ಠರಾದವರಿಗೆ ಮತದಾನದ ಅಧಿಕಾರ—** ಸಾಮ್ಯವಾದದಲ್ಲಿ ವ್ಯಕ್ತಿ ಒಡೆತನಕ್ಕೆ ಸ್ಥಾನವೇಯಿಲ್ಲ. ಭೂಮಿಯ ಒಡೆತನದ ಮೇಲೆ ಇದ್ದ ಮತದಾನದ ಅಧಿಕಾರವು ತಾನಾಗಿ ನೆಲಕ್ಕುರುಳುವದು. ಉದ್ಯೋಗದ ಮೇರೆಗೆ ಮತದಾನದ ಅಧಿಕಾರವು ಕೊಡಲಾಗುವದು. ಈ ಪ್ರತಿನಿಧಿಗಳು ಹಿತ ಸಂಬಂಧಗಳನ್ನು ಕಾಪಾಡುವರು. ಒಂದು ನಾಡಿನ ಹಿತಸಂಬಂಧ ಗಳೆಂದು, ಪ್ರಾದೇಶಿಕವಾಗಿ ಹಂಚಲ್ಪಡುವದಿಲ್ಲ. ಉದ್ಯೋಗಾನು ಸಾರವಾಗಿ, ಕೊಡಲಾಗುವದು. ಉದ್ಯೋಗಪ್ರತಿಷ್ಠಿತವಾದ ಪ್ರಾತಿನಿಧ್ಯವೇ ಹೆಚ್ಚು ಸಮಂಜಸವಾದುದು.

ಈ ಸಂಕ್ರಮಣ ಕಾಲದ ಗಂಡಾಂತರಗಳನ್ನೆದುರಿಸಲು ಈ ಪದ್ಧತಿ ಯನ್ನು ಸೂಚಿಸಲಾಗಿದೆ. ಕೆಲವು ಕಾಲ ಸಂದಬಳಿಕ ಈಗ ವಿವಿಧವಾಗಿ ತೋರುವ ಉದ್ಯೋಗಗಳೆಲ್ಲ ಸಂಘಟಿತವಾಗಿ, ಏಕಮುಖವಾಗುವವು. ಸಾಮಾನ್ಯ ಹಿತೋದ್ದೇಶಗಳುಳ್ಳವುಗಳಾಗುವವು. ಆ ಮೇಲೆ ಈ ಮತ

ಪದ್ಧತಿಯು ಅರ್ಥವಿಹೀನವಾಗುವದು. ವರ್ಗವಿಹೀನವಾದ ಸಮಾಜದ ಉದಯವಾಗಿ, ಸಾಮ್ಯವಾದದ ಪೂರ್ಣಾವತಾರವಾದೊಡನೆಯೇ ಈಗಿದ್ದ ರಾಜ್ಯಪದ್ಧತಿಯು ತಾನಾಗಿಯೇ ಕಳಚಿ ಬೀಳುವದು. ಆಗ ರಾಷ್ಟ್ರದ ಶಾಸನ ಸಭೆಗಳ ಚುನಾವಣೆಯು ಬದಲು, ಉದ್ಯೋಗ ವಿದ್ಯಾ ಮಂಡಲಗಳ ಪ್ರತಿನಿಧಿಗಳ ಆಯ್ಕೆಯು ನಡೆಯುವದು. ಪ್ರಾತಿನಿಧಿಕ ಪ್ರಭುತ್ವದ ಪದ್ಧತಿಯಲ್ಲಿ ಪ್ರಚಂಡ ಕ್ರಾಂತಿಯುಂಟಾಗುವದು.

ಕಾಂಗ್ರೆಸ ಸಾಮ್ಯವಾದಿಗಳು ಈ ಯೋಜನೆಗಳನ್ನು ಮಂಡಿಸಿದ್ದಾರೆ. ಅವು ಬಹು ವ್ಯಾಪಕವಾಗಿವೆ. ಅವುಗಳನ್ನು ಕಾರ್ಯರಂಗಕ್ಕಿಳಿಸಲು ಸಾಹಸ, ಶ್ರದ್ಧೆ, ಶಕ್ತಿಗಳು ಬೇಕು. ಕ್ರಾಂತಿಯನ್ನು ಅಪೇಕ್ಷಿಸುವ ನವಯುವಕರು, ಮುಂದೆ ಬರಲೇ ಬೇಕೆಂಬುದೇ ನಮ್ಮ ಬಯಕೆ.

ಈ ರೀತಿಯಾಗಿ, ಭಾರತೀಯ ಸಾಮ್ಯವಾದಿಗಳ ಕಾರ್ಯಕ್ರಮವನ್ನು ಸುಪ್ರಸಿದ್ಧ ಸಾಮ್ಯವಾದಿಗಳಾದ ಶ್ರೀ. ಜಯಪ್ರಕಾಶ ನರೇಣರು ವಿವರಿಸಿದ್ದಾರೆ. ಈ ವಿವರಣೆಯು ಸಾಮ್ಯವಾದದ ಸಮರ್ಥನೆಯನ್ನು ಚನ್ನಾಗಿ ಮಾಡಿದೆ. ಇಲ್ಲಿಯ ವರೆಗೆ ಸಾಮ್ಯವಾದದ ಎಲ್ಲ ಮಾತುಗಳನ್ನು ಹೇಳಿದಂತಾಯಿತು. ಇನ್ನು ಸಾಮ್ಯವಾದವು ಬಳಕೆಯಲ್ಲಿ ಬಂದರೆ ಸಾಮಾಜಿಕ ಜೀವನದ ಮೇಲೆ ಆಗುವ ಪರಿಣಾಮಗಳನ್ನು ಮುಂದೆ ವಿವರಿಸುತ್ತೇವೆ.

---

# ಸಾಮ್ಯವಾದದ ಪರಿಣಾಮಗಳು

೯



ವ್ಯಕ್ತಿ ಒಡೆತನವು ನಾಶವಾಗಿ, ಸಾಮ್ಯವಾದವು ಮಾನವನ ಜೀವನದಲ್ಲಿಳಿದರೆ, ಜಗತ್ತಿನಲ್ಲಿ ಸಾಮಾಜಿಕ ಕ್ರಾಂತಿಯುಂಟಾಗಿ ಕೆಲವು ಸೋಜಿಗದ ಸಂಗತಿಗಳು ಕಣ್ಣಿಗೆ ಬೀಳಬಹುದು. ನಮ್ಮ ಎಲ್ಲ ಸಾಮಾಜಿಕ ರೋಗಗಳಿಗೆ, ಆರ್ಥಿಕ ಅಸಮಾನತೆಯೇ ಮೂಲವೆಂದು ಕಂಡು ಹಿಡಿದ ಬಳಿಕ, ಅದರ ಅಳಿಗಾಲದಲ್ಲಿಯೇ ಮಾನವನ ಏಳಿಗೆ ಎಂಬುದನ್ನು ಹೇಳಲಿಕ್ಕೆ ಬೇಡ.

**ಸ್ವಾತಂತ್ರ್ಯದ ಘೋಷಣೆ**— ಸಾಮ್ಯವಾದೀ ಸರಕಾರವು ಸ್ಥಾಪಿತವಾದೊಡನೆಯೇ ವ್ಯಕ್ತಿ ಒಡೆತನವು ಅಳಿದು ಆರ್ಥಿಕ ಅಸಮಾನತೆಯು ಮಾಯವಾಗುವದು. ಶ್ರೀಮಂತರು, ಬಡವರು, ಸೇವ್ಯರು ಸೇವಕರು, ಕೀಳು ಮೇಲೆಂಬ ಭೇದಗಳೆಲ್ಲ ಬಯಲಾಗಿ, ಸಾವಿರಾರು ವರ್ಷಗಳಿಂದ ಧನಿಕರ ದವಡೆಯೊಳಗೆ ಸಿಕ್ಕು, ನುಚ್ಚುನುರಿಯಾಗಿ ಬಳಲುತ್ತಿದ್ದ ಸಮಾಜವು ಆರ್ಥಿಕ-ದಾಸ್ಯದಿಂದ ಮುಕ್ತವಾದೊಡನೆಯೇ ಅದಕ್ಕೆ ಎಷ್ಟು ಆನಂದವಾಗಬಹುದು! ಜಗತ್ತಿನ ಬಹುಸಂಖ್ಯಾಕರು ಮುಕ್ತರಾದೊಡನೆ, ಮತ್ತರಾಗಿ, **ನಾವಿಂದು ನಿರ್ಭಯರು, ನಿರಂಕುಶರು** ಎಂದು ಕ್ಷಣಕಾಲ ಸ್ವಾತಂತ್ರ್ಯ ಸುಖವನ್ನು ಅನುಭವಿಸುವ ದೃಶ್ಯವು ನಿಜವಾಗಿಯೂ ರಮಣೀಯವಲ್ಲವೇ! ಪಾರತಂತ್ರ್ಯದ ಮುಕ್ತತೆಯ ಸುಖದ ಕಲ್ಪನೆಯು ಸತ್ಯಾಗ್ರಹ ಸಮರದಲ್ಲಿ ಸೆರೆಮನೆಯನ್ನು ಕಂಡ ಪ್ರತಿಯೊಬ್ಬನಿಗಿರುವದು. ಯಾವ ಕೂಲಿಕಾರನು, ಯಾವ ಒಡೆಯನಲ್ಲಿ ದುಡಿಯುತ್ತಿರುವನೋ ಅದೇ ಒಡೆಯನ ಸರಿಸಮಾನನಾಗಿ ಮೆರೆಯುವ ಭಾಗ್ಯವು ಬಂದರೆ, ಅವನ ಹಿಗ್ಗಿಗೆ, ಬೆಲೆಯಿದೆಯೇ? ಹೀಗೆ ಎಲ್ಲಿ ನೋಡಿ

ದರೂ ಆನಂದವೇ ಆನಂದವಾಗುವದು. ಉತ್ಸಾಹವು ಉಕ್ಕೇರುವದು. ರಾಷ್ಟ್ರದಲ್ಲಿ ನವಶಕ್ತಿಯು ಸಂಚಾರವಾಗುವದು. ದುರ್ಬಲವಾದ ರಾಷ್ಟ್ರವು ತೇಜೋಮಯವಾಗಿ, ಪ್ರಬಲ ರಾಷ್ಟ್ರವಾಗುವದು. ಎಲ್ಲಿ ನೋಡಿದರೂ ಯಾವ ಕ್ಷೇತ್ರದಲ್ಲಿ ಹೊಕ್ಕರೂ, ಸ್ವಾತಂತ್ರ್ಯ ಘೋಷಣೆಯು ವೀರಗರ್ಜನೆಯೂ ಕಿವಿಗೆ ಬೀಳುವದು.

**ಕೃತ್ರಿಮ ಜಾತಿ ಪಂಥಗಳು ಉರುಳುವವು—** ನಾವು ಸುಸಂಸ್ಕೃತರು, ನಾವು ಹೆಚ್ಚಿನವರು, ಧನವಿಲ್ಲದವರೆಲ್ಲರು ಜನ್ಮಿಸಿದುದು ನಮ್ಮ ಸೇವೆಗಾಗಿ. ತಮ್ಮ ಪಾಪಕರ್ಮದಿಂದ ಅವರು ದರಿದ್ರರಾಗಿದ್ದಾರೆ. ಅವರು ಅಸ್ಪೃಶ್ಯರು. ಕೀಳರು. ವ್ಯವಹಾರಕ್ಕೆ ಅಯೋಗ್ಯರು. ಅಪಾಂಕ್ತ್ಯರು, ಎಂದು ಧನಬಲದಿಂದ ಮೆರೆಯುತ್ತಿದ್ದ ವರ್ಗವು ವ್ಯಕ್ತಿ ಒಡೆತನವು ನಾಶವಾದೊಡನೆಯೇ ನೆಲಕ್ಕುರುಳುತ್ತದೆ. ಈ ರಾಜ್ಯದಲ್ಲಿ ಕೀಳು ಮೇಲೆಂಬುದು ಇಲ್ಲವೇ ಇಲ್ಲ. ದುಡ್ಡಿನಿಂದ ಬಂದ ದೊಡ್ಡಿತೆಯಲ್ಲ ಮಣ್ಣುಗೂಡುತ್ತದೆ. ನಾವು ಉಚ್ಚಜಾತಿಯವರೆಂಬ ಭಾವನೆ ಬಯಲಾಗುತ್ತದೆ. ಸೇವ್ಯರಾರು? ಸೇವಕರಾರು? ಎಲ್ಲರೂ ರಾಷ್ಟ್ರದ ಸೇವಕರೇ! ಎಲ್ಲರೂ ಸ್ವತಂತ್ರರು, ಎಲ್ಲರೂ ಸಮಾನರು ಆದಮೇಲೆ, ಕೃತ್ರಿಮವಾದ ಜಾತಿಪಂಥಗಳೆಲ್ಲ ನೆಲಕ್ಕುರುಳುವವು. ಶ್ರೀಮಂತ-ಬಡವ, ಉಚ್ಚ ನೀಚ, ಮೊದಲಾದ ಭಾವನೆಗಳೆಲ್ಲವೂ ಮಾಯವಾಗಿ, ಸ್ವಾಭಾವಿಕವಾದ ನಿಸರ್ಗ ಸಿದ್ಧವಾದ ಶಾಸ್ತ್ರಜ್ಞರು, ಶಿಕ್ಷಕರು, ಸಾಹಿತಿಗಳು ಇವೇ ಮೊದಲಾದ ವರ್ಗಗಳು ಉದಯವಾಗುವವು. ಕೀಳು ಮೇಲೆಂಬ ಭೇದಗಳು ಹೋಗಿ, ಎಲ್ಲರೂ ಮಾನವ ಜನಾಂಗದ ಸೇವಕರೆಂಬ ಭಾವನೆಯು ನೆಲೆಯೂರಿ ಈಗಿನ ಸಾಮಾಜಿಕ ನಿರ್ಬಂಧಗಳಿಂದ ಜನಾಂಗವು ಮುಕ್ತವಾಗುವದು. ಯಾರು ಯಾರೊಡನೆಯೂ ಬಳಿಕೆ ಮಾಡಬಹುದು. ಈಗಿನಂತೆ ರಾಜರ ಮಕ್ಕಳು ರಾಜಕನ್ಯೆಯರನ್ನೇ ಮದುವೆಯಾಗಬೇಕೆಂಬ ನಿರ್ಬಂಧವಿಲ್ಲ. ಯಾಕಂದರೆ ಎಲ್ಲರೂ ಸಮಾನರೇ! ಮನವಿದ್ದರೂ ಪೂರ್ಣವಿಲ್ಲದ ಕೃತ್ರಿಮ ಜೀವನವು ಬಯಲಾಗುವದು.

**ಸಾಂಸ್ಕೃತಿಕ ಬೆಳವಣಿಗೆಯು—** ದಾರಿದ್ರ್ಯದ ಮೂಲಕ ಬಹುಸಂಖ್ಯಾಕರು ಜನ್ಮಜನ್ಮಾಂತರಗಳಲ್ಲಿಯೂ ಕೂಡ ಶಿಕ್ಷಣವನ್ನು ಕಾಣದೆ

ಉಳಿಯುವದು, ಮಾನವ ಜನಾಂಗಕ್ಕೆ ನಾಚಿಕೆಗೇಡಿತನವು. ಬಂಡವಲವಾದವೂ ಅಪರ ಸಾಮ್ರಾಜ್ಯಗಳೂ ಮಾನವ ಜನಾಂಗಕ್ಕೆ ಮಾಡಿದ ಈ ದ್ರೋಹವು ಅತ್ಯಂತ ಹೀನವಾಗಿರುವದು. ಇದರಿಂದ ಮಾನವ ಜನಾಂಗದ ಅಪರಿಮಿತ ಹಾನಿಯಾಗಿದೆ. ಬಂಡವಲದಾರರು ತಮ್ಮ ಸ್ವಾರ್ಥಕ್ಕಾಗಿ ಜನಾಂಗವನ್ನು ಅಜ್ಞಾನದಲ್ಲಿಟ್ಟಿದ್ದಾರೆ. ಆದರೆ ಸಾಮ್ಯವಾದವು ಉದಯವಾದೊಡನೆಯೇ ಈ ಭೂತಗಳು ಓಡ್ಡೋಡುತ್ತವೆ.

ಯಾವ ಶಾಲೆ ಕಾಲೇಜಗಳು ಶ್ರೀಮಂತರನ್ನು ಬರಮಾಡಿಕೊಳ್ಳುತ್ತಿದ್ದವೋ ಅವೇ ಇಂದು ಸ್ವತಂತ್ರವಾಗಿ ದೇಶದ ಜನಾಂಗವನ್ನೇ ಸ್ವಾಗತಿಸುವವು. ಎಲ್ಲೆಲ್ಲಿಯೂ ಶಿಕ್ಷಣಾಲಯಗಳು ಏರ್ಪಟ್ಟು, ಬೇಕಾದವರು ಬೇಕಾದುದನ್ನು ಕಲಿಯಬಹುದು. ಕೂಲಿಕಾರನು ಇಂದು ಒಳ್ಳೇ ಮುತ್ಸದ್ದಿಯಾಗಬಹುದು. ಗಣಿತಜ್ಞನಾಗಬಹುದು. ವಿಜ್ಞಾನಿಯಾಗಬಹುದು. ಹೀಗೆ, ಎಲ್ಲರಿಗೂ, ದುಡ್ಡಿದ್ದವರು, ದುಡ್ಡಿಲ್ಲದವರು, ಉಚ್ಚರು ನೀಚರು ಎಂಬ ಭೇದಭಾವದ ಕಲ್ಪನೆಯು ಕೂಡ ಇಲ್ಲದೆ ಶಿಕ್ಷಣವು ಕೊಡಲ್ಪಡುವದು. ಇದರಿಂದ ದರಿದ್ರರ ಬುದ್ಧಿವಂತ ಮಕ್ಕಳಿಗೆ ಎಷ್ಟು ಆನಂದವಾಗಲಿಕ್ಕಿಲ್ಲ! ಸಾಮ್ಯವಾದದ ಸರಕಾರದಲ್ಲಿ ಅವರವರ ಒಲುಮೆಗನುಸರಿಸಿ ಶಿಕ್ಷಣವು ಕೊಡಲ್ಪಡುತ್ತದೆ. ಎಲ್ಲರಿಗೂ ಅನುಕೂಲವಾಗುವಂತೆ ಅಲ್ಲಲ್ಲಿ ವಿಶ್ವವಿದ್ಯಾಲಯಗಳು ತಲೆಯೆತ್ತುತ್ತವೆ. ಬಂಡವಲದಾರರಿಂದ ತುಳಿಯಲ್ಪಟ್ಟ ಎಳೆತನದಲ್ಲಿಯೇ ಶಿಕ್ಷಣವಿಲ್ಲದೆ ಕಮರಿಹೋಗುವ ಲಕ್ಷಾವಧಿ ಜನರ ಬುದ್ಧಿಗೆ ಚಾಲನೆ ದೊರೆಯುವದು. ಅವರಲ್ಲಿ ಎಂಥ ರತ್ನಗಳಿರುವವೋ ಯಾರಿಗೆ ಗೊತ್ತು? ಅವರಲ್ಲಿ ಮಹಾ ಮುತ್ಸದ್ದಿಗಳೇಕಿರಬಾರದು? ದೊಡ್ಡ ದೊಡ್ಡ ತತ್ವಜ್ಞಾನಿಗಳಿರಬಾರದು. ಹೀಗೆ ದರಿದ್ರವರ್ಗದ ಬುದ್ಧಿಗೆ ಪ್ರಚೋದನೆ ದೊರೆತು ಇಲ್ಲಿಯವರೆಗೆ ಮಾನವ ಜನಾಂಗಕ್ಕೆ ಅವರಿಂದ ದೊರೆಯದ ಸೇವೆ ಲಭಿಸುವದು.

ಇದಲ್ಲದೆ ಸಾಮ್ಯವಾದದ ಶಿಕ್ಷಣದ ಗೊತ್ತುಗುರಿಗಳೇ ಬದಲಾಗುವವು. ವ್ಯಕ್ತಿ ಜೀವನದ ಗುರಿಯು ಮಾಯವಾಗಿ ಸಮಷ್ಟಿ ಜೀವನವೇ ಶಿಕ್ಷಣದ ಅಡಿಗಲ್ಲಾಗುವದು. ಹೀಗೆ ಒಂದಲ್ಲ, ಎರಡಲ್ಲ,

ಅನೇಕ ಸ್ಥಿತ್ಯಂತರಗಳನ್ನು ಶಿಕ್ಷಣವು ಪಡೆಯುವದು. ಮಾನವನ ಸಂಸ್ಕೃತಿಯು ಬೆಳೆಯುವದು. ಇದರಿಂದ ಹೊಸ ಮನ್ವಂತರವೇ ಪ್ರಾರಂಭವಾಗುವದೆಂದು ಹೇಳಬಹುದು.

**ರಾಜಕಾರಣ—** ಸಾಮ್ಯವಾದದಿಂದ ರಾಷ್ಟ್ರದ ರಾಜಕಾರಣವೇ ಬದಲಾಗುವದು. ಬಂಡವಲದಾರರು ತಮ್ಮ ಧನಬಲದಿಂದ ಚುನಾವಣೆಗಳನ್ನು ಜಯಿಸಿ, ರಾಜ್ಯಸೂತ್ರಗಳನ್ನು ತಮ್ಮ ಕೈಯಲ್ಲಿಯೂ ತಮ್ಮ ಹಸ್ತಕರ ಕೈಯಲ್ಲಿಯೂ ಇಟ್ಟುಕೊಳ್ಳುತ್ತಿದ್ದರು. ತಮ್ಮ ಬಂಡವಲಕ್ಕೆ ಧಕ್ಕೆ ಬರದಂತೆ ಕಟ್ಟಳೆಗಳನ್ನು ಮಾಡಿಕೊಳ್ಳುತ್ತಿದ್ದರು. ಆದರೆ ವ್ಯಕ್ತಿ ಒಡೆತನವನ್ನೇ ಕಿತ್ತೊಗೆದ ಮೇಲೆ, ಇವರಿಗೆಲ್ಲಿಯ ಸ್ಥಾನ? ಪಕ್ಷಪ್ರಧಾನವಾದ ಅನೇಕ ವರ್ಗಗಳ ಹಿತಸಂಬಂಧಗಳುಳ್ಳ ರಾಜಕಾರಣವು ಮಾಯವಾಗುವದು. ಕಾಯಿದೆ ಮಂಡಲಗಳಲ್ಲಿ ದರ್ಪದಿಂದ ಕುಳಿತ ಶ್ರೀಮಂತರ ಆಸನಗಳು ಜನಸಾಮಾನ್ಯರಿಂದ ಅಲಂಕೃತವಾಗುವವು. ರಾಷ್ಟ್ರದ ಧ್ಯೇಯವೇ ಬದಲಾಗುವದು. ರಾಷ್ಟ್ರವು ಸ್ವತಂತ್ರವಾಗಿ, ಆರ್ಥಿಕ ದಾಸ್ಯದಿಂದ ಜನತೆಯನ್ನು ಮುಕ್ತಮಾಡುವ, ಅದನ್ನು ತಡೆಯುವದನ್ನು ದಂಡಿಸುವ,ರಾಷ್ಟ್ರೀಯ ಆರ್ಥಿಕ ಯೋಜನೆಯನ್ನು ಯಶಸ್ವಿ ಮಾಡುವ, ಇವೇ ಮೊದಲಾದ ವಿಧಾಯಕ ಕಾರ್ಯಗಳಲ್ಲಿ ಮಗ್ನವಾಗಬೇಕಾಗುವದು. ಹೀಗೆ, ರಾಷ್ಟ್ರದ ರಾಜಕಾರಣವು ವ್ಯಕ್ತಿ ಒಡೆತನದ ಪರೆಯನ್ನು ತೊರೆದು ಜನಾಂಗದ ಸೇವೆಯನ್ನು ಕೈಕೊಳ್ಳುವದು. ರಾಜ್ಯತೃಷ್ಣೆಯೂ ಸ್ಪರ್ಧೆಯೂ ಇಲ್ಲದಂತಾಗುವದು. ಸಾಮ್ರಾಜ್ಯಗಳು ನೆಲಕ್ಕುರುಳುವವು.

**ನ್ಯಾಯಾಸ್ಥಾನಗಳಲ್ಲಿ ನ್ಯಾಯ ನಿಷ್ಠೆಯು ಬೆಳೆಯುವದು—** ಈಗಿನ ನ್ಯಾಯಾಸ್ಥಾನಗಳು ಒಂದು ಬಗೆಯಿಂದ ಬಂಡವಲದಾರರ ಕೈ ಬೊಂಬೆಗಳಾಗಿವೆ. ಯಾಕಂದರೆ ಅವರ ತಂತ್ರದಿಂದ ನಡೆದ ರಾಜ್ಯದ ಕಾಯಿದೆಗಳಂತೆಯೇ ಇವು ನಡೆಯುತ್ತಲಿವೆ. ಬಂಡವಲದಾರರನ್ನು ಸಮರ್ಥಿಸುವದೆಂದರೆ ಅನ್ಯಾಯಕ್ಕೆ ನ್ಯಾಯವೆಂದು ಪ್ರತಿಪಾದಿಸಿದಂತಾಗಲಿಲ್ಲವೇ! ಈಗಿದ್ದ ಕಾಯಿದೆಗಳಂತೆಯೇ ನ್ಯಾಯಾಸ್ಥಾನದಲ್ಲಿ ಶ್ರೀಮಂತರು ಬಡವರು ಎಂಬ ಭೇದವಿಲ್ಲದೆ ನ್ಯಾಯವು ಸಿಗುತ್ತಿದೆಯೆ? ಈ

ನ್ಯಾಯಾಸ್ಥಾನಗಳಲ್ಲಿ ದುಡ್ಡಿದ್ದವನಿಗೇ ಅನುಕೂಲತೆಗಳು ಹೆಚ್ಚು. ಅವನ ಕೈಯೇ ಮೇಲು. ಬಡವರಿಗೆ ಅನ್ಯಾಯವಾದರೆ, ಕೋರ್ಟಿಗೆ ಹೋಗಲು ಗತಿ ಎಲ್ಲಿ? ಅನ್ನಕ್ಕೆ ಗತಿಯಿಲ್ಲದವನು ವಕೀಲರಿಗೆ ಹಣ ಎಲ್ಲಿಂದ ತರಬೇಕು! ಹೀಗಾಗಿ ಅವನು ನ್ಯಾಯಾಸ್ಥಾನಕ್ಕೆ ಬರಲು ಕೂಡ ಅವಕಾಶವಿಲ್ಲ. ಎಷ್ಟೋ ವರ್ಷಗಳಿಂದ ತನ್ನ ಸಾಲ್ಕಿಯಲ್ಲಿದ್ದ ಹೊಲವನ್ನು ರೈತನು ಕೋರ್ಟಿನ ಬೆದರಿಕೆಯಿಂದ ಜಮೀನದಾರರಿಗೆ ಬಿಟ್ಟು ಕೊಟ್ಟ ಸಾವಿರಾರು ಉದಾಹರಣೆಗಳು ಸಮಾಜದಲ್ಲಿ ದೊರೆಯು ತ್ತವೆ. ಇಲ್ಲವಾದರೆ, ರೈತನು ಕೋರ್ಟಿನ ಕಟ್ಟೆಯನ್ನು ಹತ್ತಬೇಕು. ಹಣದ ಅಭಾವದ ಮೂಲಕ ಇವನಿಗೆ ಜಯಸಿಗುವ ಬಗೆ ಹೇಗೆ? ಜಮೀ ನುದಾರನಾದರೋ ವಕೀಲರನ್ನು ಕೊಟ್ಟು, ಇಲ್ಲದ ಪುರಾವೆಗಳನ್ನು ಹುಟ್ಟಿಸಿ, ತನ್ನಂತೆ ನಿರ್ಣಯ ಪಡೆಯುವನು. ಗೆಲವು ದೊರೆಯದಿದ್ದರೆ ಅಪೀಲು ಮಾಡುವನು. ಅಲ್ಲಿ ನ್ಯಾಯ ಸಿಗದಿದ್ದರೆ, ಅಲ್ಲಿಂದ ಮುಂದಕ್ಕೆ. ಹೀಗೆ ಧನಬಲದಿಂದ ನ್ಯಾಯಗಳನ್ನು ಗೆಲ್ಲುವವರನ್ನು ನಾವು ಕಣ್ಣಾರೆ ಕಾಣುವದಿಲ್ಲವೇ!

ಒಬ್ಬ ಬಡವನಿಗೆ ಶ್ರೀಮಂತನು ನಿಷ್ಕಾರಣವಾಗಿ ಹೊಡೆದನೆಂದೂ, ಅಪಮಾನ ಮಾಡಿದನೆಂದೂ ತಿಳಿಯುವಾ. ಬಡವನು ಇದರ ಪರಿಹಾರ ವನ್ನೆಂತು ಮಾಡಿಕೊಳ್ಳಬೇಕು! ಅದೇ ಒಬ್ಬ ಶ್ರೀಮಂತನು ಬೀದಿಯಲ್ಲಿ ಹೋಗುವಾಗ ಯಾವನಾದರೂ ನಮಸ್ಕಾರ ಮಾಡದೆ ಹಾಗೆಯೇ ಹೊರಟು ಹೋದರೆ, ಅವನಿಗೆ ಅಪಮಾನ! ಇದಕ್ಕಾಗಿ ಅವನು ಕೋರ್ಟಿಗೆ ಹೋಗಿ, ಮಾನಭಂಗವಾದುದಕ್ಕೆ ಪರಿಹಾರ ಪಡೆಯಬಹುದು. ಬಡವ ನಿಗೆ ಪರಿಹಾರ ಕೊಡಲು ಯೋಗ್ಯತೆಯಿಲ್ಲದಲ್ಲಿ, ಇವನಲ್ಲಿಯೇ ಗುಲಾಮ ನಾಗಿ ದುಡಿಯುವ ಪ್ರಸಂಗ ಬರಬಹುದು. ಇದೇ ಮೇರೆಗೆ, ಬಡವ ನೊಬ್ಬನ ಹೆಂಡತಿಯನ್ನು ತನ್ನ ಧನದ ಬಲದಿಂದ ವಶಪಡಿಸಿಕೊಂಡು, ಮರಳಿ ಅವನಿಗೇ ಧರ್ಮೋಪದೇಶ ಮಾಡಿ, ಪ್ರಸಂಗಬಿದ್ದರೆ ಬೆದರಿಸಿ, 'ಮದುವೆಗೆ ಹಣವನ್ನು ಕೊಡುತ್ತೇನೆ ಬೇರೊಂದು ಮದುವೆ ಮಾಡಿಕೊ, ಎಂದು ಹೇಳುವ ಮಹಾಮಹಿಮರ ಉದಾಹರಣೆಗಳಿಗೇನೂ ಕೊರತೆ ಯಿಲ್ಲ. ಇದರಂತೆಯೇ ಎಷ್ಟೋ ಶ್ರೀಮಂತ ಹೆಣ್ಣುಮಕ್ಕಳು ಬಡವಳ

ಗಂಡನನ್ನು ಒಲಿಸಿಕೊಂಡು ಬಡಹೆಣ್ಣುಮಕ್ಕಳ ಗೋಳನ್ನು ಕಟ್ಟಿಕೊಂಡವರೇನೂ ಕಡಿಮೆಯಿಲ್ಲ. ಹೀಗಾಗಲು ಮುಖ್ಯ ಕಾರಣವು ಬಡತನವು. ನ್ಯಾಯಸ್ಥಾನದ ಕಟ್ಟೆಯನ್ನೇರುವ ಯೋಗ್ಯತೆ ಇರದಿರುವದೇ ಮುಖ್ಯ ಕಾರಣ. ಇದಲ್ಲದೆ, ಹೋದರೆ ನ್ಯಾಯಸಿಗುವದೆಂಬ ಭರವಸೆಯಿಲ್ಲ. ಹೀಗಾಗಿ,ಬಡವರು ಕೇವಲ ಬಡತನದಲ್ಲಿ ಹುಟ್ಟಿದ್ದಕ್ಕೆ ನ್ಯಾಯಸ್ಥಾನಕ್ಕೆ ಎರವಾಗಿ ತಮ್ಮ ಹೆಂಡರುಮಕ್ಕಳನ್ನು ಒಮ್ಮೊಮ್ಮೆ ನಿರುಪಾಯರಾಗಿ ಧನವಂತರ ಕಾಮತೃಷ್ಣೆಗೆ ಬಲಿಕೊಡಬೇಕಾಗುವದು.

ಕ್ರಿಮಿನಲ್ ಖಟ್ಲೆಗಳಲ್ಲಿ ಸರಕಾರವೇ ನ್ಯಾಯ ನಡೆಯಿಸುವದರಿಂದ ಬಡವರಿಗೆ ಒಳ್ಳೇ ಅನುಕೂಲವೆಂದು ಭಾವಿಸಬೇಕೆ? ಅಲ್ಲಿಯೂ ಅವರಿಗೆ ಇದೇ ಗತಿ. ಆರೋಪಿಯು ಬಡವನಿದ್ದರೆ ತೀರಿತು. ಶ್ರೀಮಂತರಾದ ಜೂರಿಗಳಿಗೆ ಬಡವರ ಬಗ್ಗೆ ಮೊದಲೇ ತಿರಸ್ಕಾರ. ಕಳವು, ದರೋಡೆ ಮೊದಲಾದ ಅನ್ಯಾಯಗಳಲ್ಲಂತೂ ಹೆಚ್ಚು ಹೆಚ್ಚು ಶಿಕ್ಷೆ ಕೊಡಿಸಬೇಕೆಂಬುದೇ ಅವರ ಪ್ರವೃತ್ತಿ. ಒಂದು ಕೋಳಿ ಕದ್ದದ್ದಕ್ಕೆ ಎರಡು ವರ್ಷ ಕಠಿಣ ಶಿಕ್ಷೆಯಾದ ಉದಾಹರಣೆಗಳೂ ದೊರೆಯುವವು. ಆದರೆ ಲಕ್ಷಾಂತರ ರೂಪಾಯಿಗಳ ಬ್ಯಾಂಕುಗಳನ್ನು ಮುಳುಗಿಸಿ, ತಮ್ಮ ಧನ ಬಲದಿಂದ ನ್ಯಾಯಸ್ಥಾನದಲ್ಲಿ ನಿರ್ದೋಷಿಗಳೆಂದು ನಿರ್ಣಯ ಮಾಡಿಸಿಕೊಂಡು ಮೆರೆಯುವವರೇನು ಕಡಿಮೆ? ಅವರು ತಮ್ಮ ಧನಬಲದಿಂದ ಇಂಥ ಖಟ್ಲೆಗಳು ಬೇಕಾದಷ್ಟು ದಿನ ನಡೆಯುವಂತೆ ಮಾಡಬಹುದು, ಮಾಡುವರು. ಅಮೇರಿಕೆಯಲ್ಲಿ ಇಂಥ ಅನೇಕ ಆರೋಪಗಳಿದ್ದ ವ್ಯಕ್ತಿಯು ತೀರಿಕೊಂಡು ೬ ತಿಂಗಳಾದರೂ ನ್ಯಾಯಸ್ಥಾನದಲ್ಲಿ ಇನ್ನೂ ನಿರ್ಣಯವೇ ಆಗಿದ್ದಿಲ್ಲವಂತೆ! ಹೀಗೆ ದುಡ್ಡಿದ್ದವನಿಗೆಯೇ ನ್ಯಾಯ, ದುಡ್ಡಿಲ್ಲದವನಿಗೆ ನ್ಯಾಯವಿಲ್ಲ. ವ್ಯಕ್ತಿ ಒಡೆತನವು ನಾಶವಾಗಿ ಆರ್ಥಿಕ ಸಮಾನತೆಯು ಉಂಟಾಯಿತೆಂದರೆ, ಯಾವ ಪಕ್ಷದವರಿದ್ದರೂ ಸಮಬಲವಿರುವ ಮೂಲಕ ಅನ್ಯಾಯಕ್ಕೆ ಅವಕಾಶವೇ ಉಳಿಯುವದಿಲ್ಲ. ಅದರಂತೆಯೇ ಪೂರ್ವ ಗ್ರಹಕ್ಕೂ ಎಡೆಯೇ ಇಲ್ಲ. ಹೀಗೆ ಸಾಮ್ಯವಾದವು ನ್ಯಾಯಸ್ಥಾನಗಳಲ್ಲಿ ಅನ್ಯಾಯಕ್ಕೆ ಎಡೆಯಿದ್ದ ವರ್ಗಭೇದವನ್ನು ನಾಶಮಾಡಿ ನ್ಯಾಯಾ-

ಸ್ಥಾನವನ್ನು ನ್ಯಾಯಸಿಷ್ಠುರ ಮಾಡುತ್ತದೆ. ಎಂಥವರಿಗೂ ನ್ಯಾಯ ದೊರೆಯಲು ಅನುಕೂಲವಾಗುತ್ತದೆ.

**ಧರ್ಮಪೀಠಗಳು ತತ್ತರಿಸುತ್ತವೆ—** ಸಾಮ್ಯವಾದವು ಸಾಮಾಜಿಕ ಜೀವನದಲ್ಲಿ ಕ್ರಾಂತಿಯನ್ನುಂಟುಮಾಡಿದಂತೆಯೇ ಧಾರ್ಮಿಕ ಕ್ಷೇತ್ರದಲ್ಲಿಯೂ ತನ್ನ ಪ್ರಭಾವವನ್ನು ಬೀರದೆ ಬಿಡುವದಿಲ್ಲ. ಎಲ್ಲ ರೀತಿಯ ಅಪಹಾರಗಳಿಂದ ಜನಾಂಗವನ್ನು ಮುಕ್ತಮಾಡುವ ಪ್ರತಿಜ್ಞೆಗೈದ ಸಾಮ್ಯವಾದವು ಧಾರ್ಮಿಕ ಸುಲಿಗೆಯನ್ನಾದರೂ ಹೇಗೆ ಸಹಿಸುವದು? ಅದರಲ್ಲಿಯೂ ಇಂದಿನ ಧಾರ್ಮಿಕ ಪೀಠಗಳಲ್ಲಿ, ಜನಾಂಗದ ಮಾನಸಿಕ ಅಧ್ಯಾತ್ಮಿಕ ಬೆಳವಣಿಗೆಯ ಬದಲು ಆರ್ಥಿಕ ಸುಲಿಗೆಯೇ ಮುಖ್ಯವಾಗಿ ಕುಳಿತಿದೆ. ಇವು ಬಂಡವಲವಾದವನ್ನು ಸಮರ್ಥಿಸುತ್ತವೆ. ಮಾನವನ ಪ್ರಗತಿಗೆ, ಪ್ರಗತಿಪರವಾದ ವಿಚಾರಕ್ಕೆ, ಎಡೆಯೇ ಇಲ್ಲದಾಗಿದೆ. ಬಂಡವಲದಾರರನ್ನು ಭಟ್ಟಂಗಿಗಳಂತೆ ಹೊಗಳುವದೇ ಇವುಗಳ ಕಾರ್ಯ. ಮೇಲೆ ಅದಕ್ಕೆ ಧರ್ಮದ ಹೊದಿಕೆ. ಪಾಪ, ಪುಣ್ಯಗಳ ಬೆದರಿಕೆಯಿಂದ ಆರ್ಥಿಕ ಸುಲಿಗೆಯನ್ನು ನಡೆಯಿಸಿವೆ.

ಶ್ರೀಮಂತನಾಗುವದು, ಬಡವನಾಗುವದು, ಪೂರ್ವಜನ್ಮದ ಕರ್ಮಾನುಸಾರ. ಕಡುಪಾಪಿಯಾದವನು ಬಡತನದಲ್ಲಿ ಬಳಲುವನು. ಪೂರ್ವಜನ್ಮದ ಪುಣ್ಯದಿಂದಲೇ ಇಂದು ಸಿರಿವಂತರ ಹೊಟ್ಟೆಯಲ್ಲಿ ಹುಟ್ಟುವನು. ಆದ್ದರಿಂದ ದಾನಧರ್ಮಗಳನ್ನು ಮಾಡಿರಿ. ಯಾವಾಗಲೂ ಪುಣ್ಯಕಾರ್ಯಗಳನ್ನೇ ಮಾಡುತ್ತಿರಬೇಕು; ಅಂದರೆ ದಾನ ಕೊಡಬೇಕು. ವ್ರತ–ಉಪವಾಸಗಳನ್ನು ಮಾಡಿರಿ. ಇಂಥ ವ್ರತಕ್ಕೆ ಇಂತಿಷ್ಟು ಬ್ರಾಹ್ಮಣ ಭೋಜನ, ಇಂತಿಷ್ಟು ದಾನ, ಇದನ್ನು ಮಾಡದಿದ್ದರೆ ಮೋಕ್ಷವಿಲ್ಲ, ನರಕಕ್ಕೆ ಹೋಗುವಿರಿ, ಇಂಥದನ್ನು ದಾನಮಾಡಿದರೆ, ಸ್ವರ್ಗದಲ್ಲಿ ಇಂಥದು ಸಿಗುವದು, ಹಾಸಿಗೆ ದಾನಮಾಡಿದರೆ, ಅಲ್ಲಿ ಸುಖಶಯ್ಯೆ ದೊರೆಯುವದು, ಛತ್ರಿಗಳನ್ನು ದಾನಮಾಡಿದರೆ, ಅಲ್ಲಿ ನೆರಳು ಸಿಗುವದು. ಇತ್ಯಾದಿ ಅನೇಕಾನೇಕ ದಾನಗಳು, ಧರ್ಮಗಳು ತಲೆಯೆತ್ತಿವೆ. ಅವುಗಳನ್ನು ವರ್ಣಿಸುವ ಗ್ರಂಥಗಳಿಗೇನು ಕಡಿಮೆಯಿಲ್ಲ. ಎಲ್ಲ ಧರ್ಮಗಳು

ದುಡ್ಡಿನ ಮೇಲೆ ನಿಂತಿವೆ. ದುಡ್ಡಿದ್ದವನಿಗೆ ಧರ್ಮ, ದುಡ್ಡಿಲ್ಲದವನಿಗೆ ಧರ್ಮವಿಲ್ಲ; ಎಂಬ ಕಲ್ಪನೆಯು ಬೆಳೆದು ಮನುಷ್ಯನು ಹೇಗಾದರೂ ಮಾಡಿ ಧನಸಂಗ್ರಹಿಸುವನು. ಅವನು ಎಂಥ ಅನ್ಯಾಯಗಳನ್ನು ಮಾಡಿ ದುಡ್ಡು ಗಳಿಸಿದ್ದರೂ, ಅದರಲ್ಲಿಯ ಕೆಲವು ಅಂಶವನ್ನು ದಾನ ಮಾಡಿದರೆ ಅವನು ಧರ್ಮಿಷ್ಠನೆ! ಉದಾಹರಣೆಗಾಗಿ ಲಂಚವನ್ನು ತಿನ್ನುವದು ಪಾಪವೆಂದು ಗೊತ್ತಿದ್ದರೂ ಧರ್ಮಪೀಠದಲ್ಲಿ ಇವರಿಗೇ ಮರ್ಯಾದೆ. ಯಾಕಂದರೆ ಅವನು ದುಡ್ಡು ಕೊಡುವನು. ಅತ್ಯಂತ ವ್ಯಭಿಚಾರಿಯೂ ಸಮಾಜದ್ರೋಹಿಯೂ ದುಡ್ಡಿದ್ದರೆ ಇಂದು ಧರ್ಮಿಷ್ಠನು, ಯಾಕಂದರೆ ಶ್ರೀಗಳನ್ನು ಮನೆಗೆ ಕರೆಯುವನು. ಈ ಅನ್ಯಾಯವೂ ಧರ್ಮಪೀಠ ದಲ್ಲಿಯೂ ನ್ಯಾಯವೆ, ಅರ್ಥಾತ್ ಸುಲಿಗೆಯೂ ನ್ಯಾಯವೇ! ಅಂದರೆ ಎಂಥ ಅನ್ಯಾಯ ಮಾಡುವವನೂ, ಅನೀತಿವಂತನೂ, ಅಧಾರ್ಮಿಕನೂ, ಇದ್ದರೂ ಧರ್ಮದ ಸೋಗಿನಿಂದ ಇಂದು ಸುಳ್ಳುಮಾತನಾಡಿ, ಸ್ವಾಮಿಗಳಿಗೆ ದುಡ್ಡು ಸುರುವಿದರೆ, ದೊಡ್ಡವನೂ ಧರ್ಮಿಷ್ಟನೂ, ಆಗು ವನು. ಅವರಿಗೇ ಈ ಪೀಠಗಳಲ್ಲಿ ಮರ್ಯಾದೆ. ಅವರಿಗೇ ಉಚ್ಚಸ್ಥಾನ. ಹೀಗೆ ಅಸತ್ಯವು, ಅಧರ್ಮವು ದುಡ್ಡಿನಿಂದ ಧರ್ಮಪೀಠವನ್ನು ವಶಪಡಿಸಿ ಕೊಂಡು ಧರ್ಮದ ಹೆಸರಿನಿಂದ ಮೆರೆಯುತ್ತಲಿವೆ. ಸತ್ಯವಂತನಾದ, ಧಾರ್ಮಿಕನಾದ ಅಧ್ಯಾತ್ಮಿಗೆ, ಈ ಪೀಠಗಳಲ್ಲಿ ಮಾನವಿಲ್ಲ. ಮರ್ಯಾದೆ ಯಿಲ್ಲ. ಯಾಕಂದರೆ, ಅವನು ಬಡವ—ಅವನು ತಪ್ಪುಮಾಡದಿದ್ದರೂ, ಪೀಠಗಳ ಅವಕೃಪೆಗೆ ಪಾತ್ರನಾದರಂತೂ—ಅವನು ನರಕಕ್ಕೇ ಹೋಗ ಬೇಕು. ಅವನಿಗೆ ಶುದ್ಧಿಯಿಲ್ಲ. ಸಹಭೋಜನವಿಲ್ಲ. ಸಮಾಜದಿಂದ ಬಹಿಷ್ಕೃತನು. ಯಾಕಂದರೆ ಅವನ ಹತ್ತಿರ ಹಣವಿಲ್ಲ. ಹೀಗಿದೆ ನಮ್ಮ ಧರ್ಮಪೀಠಗಳ ಸ್ಥಿತಿ. ದುಡ್ಡಿದ್ದವನಿಗೆ ಮರ್ಯಾದೆ, ಅವನೇ ಧಾರ್ಮಿಕ, ಅವನೇ ಮೋಕ್ಷಕ್ಕೆ ಯೋಗ್ಯ. ಇಲ್ಲಿಯೂ ಬಡವರಿಗೆ ಸ್ಥಾನವಿಲ್ಲ.

ಇನ್ನು ಧರ್ಮಪೀಠಗಳು ಹೇಗಿವೆ? ಸಂಪತ್ತಿನಿಂದ ತುಂಬಿ ತುಳು ಕುತ್ತಿವೆ. ಅನ್ಯಾಯಗಳ ತವರುಮನೆಯಾಗಿವೆ. ಧರ್ಮದ ಹೆಸರಿನಿಂದ ಜನರನ್ನು ಸುಲಿಯುವ ಯಂತ್ರಗಳಾಗಿವೆ. ನ್ಯಾಯ ಅನ್ಯಾಯ, ನೀತಿ

ಅನೀತಿ, ಇವುಗಳಿಂದ ಅತೀತವಾಗಿವೆ. ಕೇವಲ ಧರ್ಮದ ಸೋಗು ನಡೆಯುತ್ತಿದೆ ಅಲ್ಲಿ. ಆದರೆ ಮುಸುಕಿನಲ್ಲಿ ನಡೆದದ್ದು ಏನು? ಎಷ್ಟು ಸನ್ಯಾಸಿಗಳು ಎಂಥ ಕೃತ್ಯಗಳನ್ನು ಮಾಡುತ್ತಲಿದ್ದಾರೆ? ಸಾಮಾನ್ಯ ಮಾನವನು ನಡಿಯುವ ನೀತಿ ಧರ್ಮಗಳು ಕೂಡ ಇವರಲ್ಲಿ ಕಂಡು ಬರುವದಿಲ್ಲ. ಹಲವು ಕಡೆಯಲ್ಲಿ ವ್ಯಭಿಚಾರ, ಶಿಶುಹತ್ಯೆ, ಅನ್ಯಾಯ ಸುಳ್ಳುಗಳು ಧರ್ಮದ ಮರೆಯಲ್ಲಿ ಸಾಗುತ್ತಲಿವೆ. ಇಂಥ ಸಂಗತಿಗಳು ಜರುಗಿದರೂ ಜನಾಂಗವು ಅವರಿಗೆ ತಲೆಬಾಗಲೇಬೇಕು. ಯಾಕೆಂದರೆ ಅವರು ಪೀಠದ ಮೇಲೆ ಕುಳಿತವರು. ನಮ್ಮ ಉದ್ಧಾರಕರು. ಇದು ಎಂತಹ ಧರ್ಮ! ಧರ್ಮವಲ್ಲ; ಆತ್ಮವಂಚನೆ!

ಇನ್ನು ದೇವರೆಡೆಗೆ ತೆರಳೋಣ. ಅಲ್ಲಿ ಏನು ನಡೆದಿದೆ? ಅಲ್ಲಿಯೂ ಅವನ ಹೆಸರಿನಿಂದ ಧನದ ಸುಲಿಗೆ. ಯಾವ ಕ್ಷೇತ್ರಕ್ಕೇ ಹೋಗಲಿ, ದೇವರಿಗೆ ದಕ್ಷಿಣೆಯಿಲ್ಲದ ಸ್ಥಾನವಿಲ್ಲ. ಮಾತು ಎತ್ತಿದರೆ ದುಡ್ಡು. ದುಡ್ಡಿಲ್ಲದೆ ಒಂದೂ ಇಲ್ಲ. ಮಂಗಳಾರತಿಗೆ ದುಡ್ಡು, ಕಾಯಿ ಒಡೆದರೆ ದುಡ್ಡು, ತುಳಸಿ, ಬಿಲ್ವಪತ್ರಕ್ಕೆ ದುಡ್ಡು. ಅಷ್ಟೇಕೆ, ದರ್ಶನಕ್ಕೆ ಕೂಡ ದುಡ್ಡು! ಅಹಃ ದೇವನ ರಾಜ್ಯದಲ್ಲಿ ಕೂಡ ದುಡ್ಡಿನ ಹಾವಳಿಯೇ! ಅಂತೂ ದುಡ್ಡಿದ್ದವನಿಗೆ ದೇವರು, ದುಡ್ಡಿಲ್ಲದವನಿಗೆ ದೇವರಿಲ್ಲ. ಇದೆಂತಹ ಪರಿಸ್ಥಿತಿ ನೋಡಿ!

ಹೀಗೆ ಧರ್ಮಪೀಠಗಳು, ದೇವಾಲಯಗಳು, ಮಸೀದಿಗಳು, ಚರ್ಚುಗಳು, ಬಂಡವಲದಾರರ ಧನದಿಂದ ಪೋಷಿತವಾಗಿ, ಸಿರಿವಂತರನ್ನು ಮೋಕ್ಷಕ್ಕೆ ಕಳಿಸುವ ಮಾರ್ಗಗಳಾಗಿವೆ. ಇವುಗಳ ದೃಷ್ಟಿಯಲ್ಲಿಯೂ ಬಂಡವಲದಾರರು ನಡೆಯಿಸುವ ಸುಲಿಗೆಯು ನ್ಯಾಯವಾದದ್ದೇ!

ಶ್ರೀಮಂತರಾದ ಪಾದ್ರಿಗಳು, ಸಂಸ್ಥಾನಿಕರಂತಿರುವ ಮಠಾಧೀಶರೂ, ಮುಲ್ಲಾ-ಮೌಲ್ವಿಗಳೂ ಬಂಡವಲದಾರರೇ! ಇದರಿಂದಲೇ ಬಡವರಿಗೆ ಇಲ್ಲಿಯೂ ಸ್ಥಾನವಿಲ್ಲ.

ಸಾಮ್ಯವಾದವು ವ್ಯಕ್ತಿ ಒಡೆತನವನ್ನು ಅಳಿದೊಡನೆಯೇ ಈ ಮಠಗಳು ಉದುರಿಬೀಳುವವು. ದೇವಾಲಯಗಳು ಮುಕ್ತದ್ವಾರವಾಗುತ್ತವೆ.

ದಾಸವೆಂಬುದು ಶಬ್ದಕೋಶದಲ್ಲಿ ರೂಪಾಂತರವನ್ನು ಹೊಂದುತ್ತದೆ. ಇಂದು ದುಡಿಮೆಯಿಲ್ಲದೆ ಚಕ್ಕಂದ ಹೊಡೆಯುವ ಎಲ್ಲರೂ, ನಾಳೆ ಎಲ್ಲರೊಡನೆಯೂ ದುಡಿಯಬೇಕಾಗುತ್ತದೆ. ಧರ್ಮಪೀಠಗಳು ತತ್ತರಿಸುತ್ತವೆ. ಇವುಗಳ ನಡತೆಯೇ ಇವುಗಳಿಗೆ ಮೂಲ !

ಆಮೇಲೆ ಆತ್ಮೋದ್ಧಾರವು ದುಡ್ಡಿನಲ್ಲಿರದೆ, ಆತ್ಮವಿಕಾಸದಲ್ಲಿದೆ ಎಂಬ ಅರಿವು ಉಂಟಾಗುವದು. ವ್ಯಕ್ತಿಯು ಮಾನವ ಜನಾಂಗದ ಒಂದು ಅಂಗ, ಘಟಕ. ಆದುದರಿಂದ ವೈಯಕ್ತಿಕ ಮುಕ್ತಿಯು ತಳಹದಿಯ ಮೇಲೆ ಅಧ್ಯಾತ್ಮ ಶಾಸ್ತ್ರವು ವಿಶಾಲವಾಗಿ, ಸಮಷ್ಟಿಯ ಮುಕ್ತಿಯ ಸಲುವಾಗಿ ಹೆಣಗಬಹುದು. ಹೀಗೆ ಧಾರ್ಮಿಕ ಕ್ಷೇತ್ರದಲ್ಲಿಯೂ ಸಾಮ್ಯವಾದವು ಕ್ರಾಂತಿಯನ್ನು ಎಬ್ಬಿಸದೆ ಬಿಡುವದಿಲ್ಲ.

**ಸ್ತ್ರೀಯರ ಮುಕ್ತತೆ—** ಮಾನವ ಜನಾಂಗದ ಅರ್ಧಭಾಗವಾದ ಸ್ತ್ರೀಜೀವನವು ಜ್ಞಾನ ಸ್ವಾತಂತ್ರ್ಯಗಳಿಂದ ಸಾವಿರಾರು ವರ್ಷಗಳಿಂದ ವಂಚಿಸಲ್ಪಟ್ಟಿದೆ. ಪುರುಷರು ಕೂಡ ಇಂದಿಗೂ ಸಾಮ್ಯವಾದದ ರಾಜ್ಯವು ಇಲ್ಲದಿದ್ದಲ್ಲಿ ಸ್ವಾತಂತ್ರ್ಯಕ್ಕೆ ಎರವಾಗಿರುವಾಗ, ಸ್ತ್ರೀಯರನ್ನು ಯಾರು ಕೇಳಬೇಕು ?

ಸ್ತ್ರೀಯರ ಕಷ್ಟವನ್ನಂತೂ ವರ್ಣಿಸಲಳವಲ್ಲ. ಅವರಿಗೆ ಯಾವ ಸ್ವಾತಂತ್ರ್ಯವೂ ಇಲ್ಲ. ಧರ್ಮವು ಕೂಡ ಅವರಿಗೆ ದಯೆಯನ್ನು ತೋರುವದಿಲ್ಲ. ಅವರಿಗೆ ವೇದಾಧಿಕಾರವಿಲ್ಲ. ಶ್ರವಣಕ್ಕೆ ಮಾತ್ರ ಯೋಗ್ಯರು, ಎಂದು ಧರ್ಮಶಾಸ್ತ್ರಗಳು ತಲೆ ಕುಕ್ಕುತ್ತಲಿವೆ. ಅವರು ಅಡಿಗೆಮನೆಯಿಂದ ಹೊರಗೆ ಹಣಿಕೆ ಹಾಕುವದು ಕೂಡ ಪಾಪವೆಂದು ತಿಳಿಯುವ ಪುಣ್ಯಾತ್ಮರಿಗೆ ನಮ್ಮಲ್ಲಿ ಏನು ಕಡಿಮೆಯಿಲ್ಲ. ಕೆಲವು ಕಡೆಗಂತೂ, ಜೀವನಾಧಾರವಾದ ಬೆಳಕು, ಗಾಳಿಗಳಿಗೂ ಕೂಡ ಸ್ತ್ರೀಯರು ಬುರುಖಾ ಪದ್ಧತಿಯಿಂದ ಎರವಾಗಿದ್ದರೆ, ಸ್ತ್ರೀಯೆಂದರೆ ಅದೊಂದು ನಿರ್ಜೀವ ವಸ್ತುವೋ ಎನ್ನುವಷ್ಟು ಅಧೋಗತಿಗೆ ಇಳಿದಿದೆ! ಇಂದು ಪುರುಷರ ಕಲ್ಪನೆ. ಯಾಕಂದರೆ, ಸ್ತ್ರೀಯನ್ನು ದಾನಮಾಡಬಹುದಂತೆ! ಒಬ್ಬ ಸಹೋದರಿಯು ನಾವೇನು ಹಣ್ಣು ಕಾಯಿಗಳೇ ನಮ್ಮನ್ನು ದಾನ

ಮಾಡಲಿಕ್ಕೆ. ನಮಗೆ ಆತ್ಮ, ಜ್ಞಾನ, ಮೊದಲಾದವುಗಳಿಲ್ಲವೇ ಎಂದು ಕೇಳಿದ್ದು ನನ್ನ ಜ್ಞಾಪಕಕ್ಕೆ ಬರುತ್ತಿದೆ. **ಸ್ತ್ರೀಯರು ಸ್ವಾತಂತ್ರ್ಯಕ್ಕೆ ಯೋಗ್ಯರಲ್ಲ**ವೆಂದು ಮನುವೇ ಮೊದಲಾದ ಸ್ಮೃತಿಕಾರರು ಸಾರುತ್ತಲಿದ್ದಾರೆ. "ಪಿತಾ ರಕ್ಷತಿ ಕೌಮಾರೆ ಭರ್ತಾ ರಕ್ಷತಿ ಯೌವನೇ। ಪುತ್ರೋರಕ್ಷತಿ ವಾರ್ಧಕ್ಯೇ ನಸ್ತ್ರೀಸ್ವಾತಂತ್ರ್ಯಮರ್ಹತಿ।" ಎಂದು ಘಂಟಾಘೋಷವಾಗಿ ಧರ್ಮವು ನಿರ್ಬಂಧಿಸುತ್ತದೆ. ಯುರೋಪದ ಕ್ರಿಸ್ತೀಪಾದ್ರಿಗಳು ಕೆಲವು ಶತಕಗಳ ಪೂರ್ವದಲ್ಲಿ, "**ಸ್ತ್ರೀಯರಿಗೆ ಆತ್ಮವಿಲ್ಲ**" ಎಂದು ಗಂಭೀರವಾಗಿ ಉಪದೇಶಿಸುತ್ತಿದ್ದರು. ಹಿಂದುಗಳಲ್ಲಿಯಂತೂ ಸ್ತ್ರೀಯು ಪುರುಷನ ಅರ್ಧಾಂಗಿ, ಪತಿಯ ಮರಣದೊಡನೆಯೇ ಪತ್ನಿಯು ಮೃತಳಾಗದಿದ್ದರೂ, ಆಕೆಯೂ ಸತ್ತಂತೆಯೇ ಎಂದು ಬಗೆದು ಆಕೆಯನ್ನೂ (ಆಕೆಯ ಇಚ್ಛೆಯು ಇರಲಿ ಇಲ್ಲದಿರಲಿ) ಅವನೊಡನೆ ಸುಡುವ ವಾಡಿಕೆ ಇತ್ತು. ಆದರೆ ಈ ನಿಯಮವು ಪುರುಷನ ವಿಷಯವಾಗಿ ಮಾತ್ರ ಎಂದೂ ಹತ್ತುವ ಹಾಗಿಲ್ಲ.

ಅವನು ಬೇಕಾದಂತೆ ನಡೆಯಬಹುದು. ಸಾವಿರಾರು ಚಲುವೆಯರೊಡನೆ ಚಲ್ಲಾಟವಾಡಬಹುದು. ತನ್ನ ಸಾಹಸದಿಂದ ಸ್ತ್ರೀಯ ಜೀವನವನ್ನೇ ಹಾಳುಮಾಡಬಹುದು. ಪುರುಷನು ಕುಂಟನಿರಲಿ, ಕುರುಡನಿರಲಿ, ಧನಿಕನಿರಲಿ, ದರಿದ್ರನಿರಲಿ, ಬುದ್ಧಿವಂತನಿರಲಿ, ಮೂರ್ಖನಿರಲಿ, ನಿರೋಗಿಯಿರಲಿ, ರೋಗಿಯಿರಲಿ, ಪುಂಸನಿರಲಿ, ನಪುಂಸಕನಿರಲಿ, ಸ್ತ್ರೀಯು ಅವನನ್ನು ಅನುಸರಿಸಲೇಬೇಕೆಂದು, ಪುರಾಣಗಳು ಕಥೆಗಳನ್ನು ಹೇಳುತ್ತಲಿವೆ. ಮನಸ್ಸು ಬರಲಿ ಬರದಿರಲಿ, ತಂದೆಯು ಕೊಟ್ಟಮನೆಗೆ ಹೋಗಬೇಕು. ಅಂತೂ ಸ್ತ್ರೀಯು ಪುರುಷನ ಕೈಯಲ್ಲಿರುವ ಒಂದು ವಸ್ತುವು, ಭೋಗ್ಯವಸ್ತುವು. ಅವನು ಮನಬಂದಂತೆ, ಉಪಯೋಗಿಸಬಹುದು. ಸ್ತ್ರೀಯರ ವಿಷಯವಾಗಿ ಒಬ್ಬ ಹಿಂದೀ ಕವಿಯು—

"ಢೋಲ, ಗವಾರ, ಶೂದ್ರ, ಪಶು, ನಾರಿ, ಯೇ ಸಬ್ ತಾಡನಕೆ **ಅಧಿಕಾರಿ।**" ಎಂದು ವರ್ಣಿಸಿದ್ದಾನೆ.

ಸಾವಿರಾರು ವರ್ಷಗಳಿಂದ ಸ್ತ್ರೀಯರ ವಿಷಯವಾಗಿ ಪಕ್ಷಪಾತವು

ಪುರುಷರಿಂದ ನಡೆಯುತ್ತಲೇ ಇದೆ. ಇದೇ ದೃಷ್ಟಿಯಿಂದಲೇ ಧರ್ಮ ಕಟ್ಟಳೆಗಳು ಪುರುಷರಿಂದ ರಚಿಸಲ್ಪಟ್ಟಿವೆ.

ಪಾಶ್ಚಾತ್ಯ ದೇಶಗಳಲ್ಲಿ, ಹೋದ ಶತಮಾನದಲ್ಲಿ ಸ್ತ್ರೀಸ್ವಾತಂತ್ರ್ಯದ ಚಳವಳಿಯು ಪ್ರಾರಂಭವಾಗಿದೆ. ಅದರ ತೆರೆಗಳು ಭಾರತಕ್ಕೂ ಬಂದು ಮುಟ್ಟಿವೆ. ಸ್ವಾತಂತ್ರ್ಯವು ಬಾಯಿಮಾತಿನಿಂದ ದೊರೆಯುವದು ಶಕ್ಯವಿಲ್ಲ. **ಸಮಾಜದ ಇರುವಿಕೆಯಲ್ಲಿಯೇ ಬದಲಾಗದ ಹೊರತು ಸ್ತ್ರೀಸ್ವಾತಂತ್ರ್ಯವು ಶಕ್ಯವಿಲ್ಲ.** ಎಲ್ಲಿಯವರೆಗೆ ಆರ್ಥಿಕ ದಾಸ್ಯದಿಂದ ಸ್ತ್ರೀಯು ಮುಕ್ತಳಾಗಿಲ್ಲವೋ, ಎಲ್ಲಿಯವರೆಗೆ ವಿವಾಹವು ಉಪಜೀವನದ ಒಂದು ಸಾಧನವೆಂದು ತಿಳಿಯಲ್ಪಡುವದೋ, ಅಲ್ಲಿಯವರೆಗೆ ಸ್ತ್ರೀಸ್ವಾತಂತ್ರ್ಯವು ಕನಸಿನೊಳಗಿನ ಗಂಟು. ಆರ್ಥಿಕ ಸ್ವಾತಂತ್ರ್ಯದ ಗುಟ್ಟು ಇಷ್ಟೆ! ಸ್ತ್ರೀಯು ತನ್ನ ಹೊಟ್ಟೆಗಾಗಿ, ಪರರನ್ನು ಅವಲಂಬಿಸದಿರುವದು. ಭಾರತದಲ್ಲಿ ಈ ಕಲ್ಪನೆಯು ಹೊಳೆದರೂ, ಮಾಡಲು ಶಕ್ಯವಿದ್ದರೂ, ಸದ್ಯದ ಸಮಾಜದ ರೂಢಿಗಳು, ಧರ್ಮವು ಆ ರೀತಿಯಾಗಿ ಇರಗೊಡುವದಿಲ್ಲ. ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಕೂಡ ಸ್ತ್ರೀಯರಿಗೆ ಅಷ್ಟು ಸ್ವಾತಂತ್ರ್ಯವಿಲ್ಲ. ಜರ್ಮನಿಯಂಥ ರಾಷ್ಟ್ರಗಳಲ್ಲಂತೂ ಸ್ತ್ರೀಯರು ಅಡಿಗೆ ಮನೆಗೆ ಯೋಗ್ಯರು. ಯಾವ ಚಾಕರಿ, ನೌಕರಿಗಳನ್ನು ಮಾಡಕೂಡದೆಂದು ಹಿಟ್ಲರನ ಕಟ್ಟಪ್ಪಣೆ.

ಸ್ತ್ರೀಯರು ಸಂಪೂರ್ಣವಾಗಿ ಸ್ವತಂತ್ರರಾಗಬೇಕಾದರೆ, ತಮ್ಮ ಹೊಟ್ಟೆಗಾಗಿ ತಾವು ಗಳಿಸುವವರಾಗಬೇಕು. ಅವರಿಗೆ ಅನ್ನವಸ್ತ್ರಗಳಿಗಾಗಿ ಪುರುಷರ ಮೋರೆ ನೋಡುವ ಪ್ರಸಂಗ ಬರಬಾರದು. ಬೇನೆ ಬೇಸರಿಕೆಗಳಲ್ಲಿ, ಮುಪ್ಪಿನಲ್ಲಿ, ಕೂಡ ಗಂಡ ಮತ್ತು ಮಕ್ಕಳ ಮೇಲೆ ಅವಲಂಬಿಸದಂತಾದರೆ ಮಾತ್ರ ಅವರು ಪೂರ್ಣ ಸ್ವತಂತ್ರರಾಗುವರು.

ಈ ಪರಿಸ್ಥಿತಿಯನ್ನುಂಟುಮಾಡಲು ಸಾಮ್ಯವಾದವೊಂದೇ ಸಮರ್ಥವು. ವ್ಯಕ್ತಿ ಒಡೆತನವನ್ನು ನಾಶಮಾಡಿ ಎಲ್ಲರನ್ನೂ ಸ್ವತಂತ್ರ ಮಾಡುತ್ತದೆ. ಸ್ತ್ರೀಯರು ಪುರುಷರಿಂದ ಮುಕ್ತರಾಗುತ್ತಾರೆ. ಸಾಮ್ಯವಾದೀ ರಾಜ್ಯದಲ್ಲಿ ಅವರು ಸ್ವತಂತ್ರವಾಗಿ ಉದ್ಯೋಗಗಳನ್ನು ಕೈಕೊಳ್ಳು

ವರು. ಶಾಲೆ ಕಾಲೇಜುಗಳಿಗೆ ಹೋಗಿ, ಬುದ್ಧಿವಂತರಾಗಿ ಸುಸಂಸ್ಕೃತರಾಗುವರು. ಹೆರಿಗೆ ಆಸ್ಪತ್ರಿಗಳು, ಮುಪ್ಪಿನ ಕಾಲದಲ್ಲಿ ಸಲಹುವ ನಿಲಯುಗಳು, ರಾಷ್ಟ್ರದಿಂದ ತೆರೆಯಲ್ಪಟ್ಟಿರುತ್ತವೆ. ಇಂದು ಅವರು ಸರ್ವತಂತ್ರ ಸ್ವತಂತ್ರರು. ಪ್ರೇಮವಿವಾಹದಿಂದ ಸುಖಜೀವಿಗಳಾಗಬಹುದು. ದೇಶಸೇವೆಯಲ್ಲಿ ನಿರತರಾಗಬಹುದು. ಹೀಗೆ ಜಗತ್ತಿನ ಅರ್ಧ ಜನಾಂಗವು ಪಾರತಂತ್ರ್ಯ ಅಜ್ಞಾನಗಳಿಂದ ಮುಕ್ತವಾಗಿ ಮಾನವ ಜನಾಂಗದ ಸೇವೆಯನ್ನು ಕೈಕೊಂಡರೆ, ಎಂಥ ಕ್ರಾಂತಿಯುಂಟಾಗಬಹುದು? ಇದನ್ನು ಪ್ರತಿಯೊಬ್ಬರೂ ತಮ್ಮ ಮನಸ್ಸಿನಲ್ಲಿಯೇ ಚಿತ್ರಿಸಿ ನೋಡಬೇಕು.

**ಸತ್ ಸಂತಾನ—** ಆರ್ಥಿಕ ಅಸಮಾನತೆಯು ನಮ್ಮ ಜನಾಂಗವನ್ನೇ ನಾಶಮಾಡಿದೆ. ಬಂಡವಲದಾರರ ಅನೀತಿಯಿಂದ ಇಂದು ಸಮಾಜವು ಅನೇಕ ರೋಗಗಳಿಗೆ ತುತ್ತಾಗಿದೆ. ಗಿರಣೀರೋಗ, ಮಹಾರೋಗ, ಕುಷ್ಟದಂಥ ರೋಗಗಳು ಸಮಾಜದಲ್ಲಿ ಮನೆಮಾಡಿಕೊಂಡು, ಸಮಾಜವನ್ನೇ ಸುಡುತ್ತಲಿವೆ. ಈ ರೋಗಗಳು ಸುಂಕಗಳಿದ್ದು ಇವುಗಳ ಪರಿಣಾಮಗಳು ಚಿಕ್ಕ ಸಂತಾನದ ಮೇಲೆ ಆಗುತ್ತವೆ. ಇದೆಲ್ಲಕ್ಕೂ ವೇಶ್ಯೆಯರೆ ಕಾರಣರು. ಅವರನ್ನು ಪ್ರತಿಬಂಧಿಸಲು ಈಗಿನ ಸಮಾಜದಲ್ಲಿ ಶಕ್ಯವಿಲ್ಲ. ಇಷ್ಟೇ ಅಲ್ಲ, ಧರ್ಮದ ಹೆಸರಿನಿಂದ ದೇವದಾಸಿಯರೂ ಬಿಡಲ್ಪಟ್ಟು ಇದಕ್ಕೆ ಉತ್ತೇಜನವೇ ದೊರೆಯುತ್ತದೆ. ದೇವತೆಗಳ ರಾಜ್ಯದಲ್ಲಿ ಕೂಡ ಅಪ್ಸರೆಯರು ಬೇಕೆಂದಬಳಿಕ ಕೇಳುವದೇನು? ಇವರಿಗೆಲ್ಲ ನಮ್ಮ ಬಂಡವಲುದಾರರೇ ಆಧಾರಸ್ತಂಭರು. ಇವರೇ ಸಮಾಜದ ಘಾತಕ್ಕೆ ಕಾರಣರು. ರಾಷ್ಟ್ರವು ಈ ರೋಗಗಳಿಂದ ಮುಕ್ತವಾಗಬೇಕಾದರೆ, ಈ ವರ್ಗವು ನಾಶವಾಗದ ಹೊರ್ತು ಗತ್ಯಂತರವೇ ಇಲ್ಲ, ಇದಕ್ಕೆ ಸಾಮ್ಯವಾದ ಒಂದೇ ದಿವ್ಯೌಷಧವು. ವ್ಯಕ್ತಿ ಒಡೆತನವು ನಾಶವಾದೊಡನೆಯೇ ವ್ಯಭಿಚಾರಕ್ಕೆ ಆಶ್ರಯವಾದ ಧನವು ಮಾಯವಾಗುವದು. ಇದೂ ಅಲ್ಲದೆ ವೇಶ್ಯಾವೃತ್ತಿಗೆ ಮುಖ್ಯ ಕಾರಣವಾದ ಬಡತನವು ಹೋಗುವದರಿಂದ ಹೊಟ್ಟೆಬಟ್ಟೆಯ ಚಿಂತೆ ಇಲ್ಲದಿರುವದರಿಂದ ಅವರೂ

ಸಂಘಾರಿಸಿ ನೀತಿವಂತರಾಗಿ ಬಾಳಲು ಅನುಕೂಲವಾಗುವದು. ಸಾಮ್ಯ ವಾದೀ ಸರಕಾರವು ರಾಷ್ಟ್ರದ ಸಂತತಿಯ ದೃಷ್ಟಿಯಿಂದ ಇಂಥ ರೋಗಿ ಗಳನ್ನು ಸಮಾಜದಿಂದ ಬೇರ್ಪಡಿಸುವದು. ಸಮಾಜವನ್ನು ರೋಗ ಗಳಿಂದ ಮುಕ್ತಮಾಡುವದು.

ಆರ್ಥಿಕ ಸಮಾನತೆಯಿಂದ ಆಗಬಹುದಾದ ಮಹತ್ವದ ಪರಿಣಾಮ ವೆಂದರೆ, ನಮ್ಮ ಮುಂದಿನ ಪೀಳಿಗೆಯು ಸಶಕ್ತವೂ ನಿರೋಗಿಯೂ ಆಗುವದು. ಈಗಿನ ಸಮಾಜದ ರಚನೆಯಲ್ಲಿ ಒಳ್ಳೇ ಮಕ್ಕಳು ಹುಟ್ಟಲು ಅವಕಾಶವೇಯಿಲ್ಲ. ಪಶುಗಳಲ್ಲಿ ಸ್ವಾಭಾವಿಕವಾಗಿ, ಒಳ್ಳೇ ಸಶಕ್ತ ಗಂಡು-ಹೆಣ್ಣು ಮಕ್ಕಳನ್ನು ಕೂಡಿಸಿದರೆ, ಹೇಗೆ ಒಳ್ಳೇ ಸಂತತಿಯಾಗು ವದೋ ಹಾಗೆಯೇ ಮಾನವರಲ್ಲಿಯೂ ಇರುವದು. ಆದರೆ ನೈಸರ್ಗಿಕ ವಾದ ಕ್ರಮವು ಈಗಿನ ಸಮಾಜದಲ್ಲಿ ತಲೆಕೆಳಗಾಗಿದೆ.

ಸಾಮಾಜಿಕ ರೂಢಿ, ವರದಕ್ಷಿಣೆ, ಮನೆತನದ ಕೀರ್ತಿ ಇತ್ಯಾದಿ ಪ್ರಶ್ನೆಗಳು ತಲೆಯೆತ್ತಿ ಪ್ರೇಮವಿವಾಹಗಳು ಆಗುವದೇ ಇಲ್ಲ. ವಧೂ- ವರರು ಒಂದೇ ವರ್ಗದವರಿರಬೇಕೆಂದು ರೂಢಿಯು ಬಲವಂತಪಡಿಸುತ್ತದೆ. ಒಬ್ಬ ಶ್ರೀಮಂತನು ತನಗನುರೂಪಳಾದ, ಬುದ್ಧಿವಂತಿಯಾದ, ಸುಂದರ ಳಾದ ಬಡಕನ್ಯೆಯನ್ನು ಇಂದು ಮದುವೆಯಾಗಲಾರನು. ಶ್ರೀಮಂತನು ಶ್ರೀಮಂತನ ಮಗಳನ್ನೇ ಮದುವೆಯಾಗಬೇಕೆಂಬ ವೃಥಾ ದೊಡ್ಡಿಕೆ ಪ್ರೇಮಭಂಗವನ್ನು ಮಾಡುತ್ತದೆ. ಬಡವನು ಬಡವಳನ್ನೇ ಮದುವೆ ಯಾಗಬೇಕು. ಶ್ರೀಮಂತನು ಶ್ರೀಮಂತಳನ್ನೇ ಆಗಬೇಕು. ಹೀಗೆ ರೂಢಿಯು ಸಮಾಜವನ್ನು ನಿರ್ಬಂಧಿಸಿದೆ. ದುಡಿಯದ ಶ್ರೀಮಂತರು ಅಶಕ್ತರಾಗಿ ಅವರ ಮಕ್ಕಳೂ ಅಶಕ್ತರಾಗಹತ್ತಿರುವರು. ಇತ್ತ ಬಡವರ ಮಕ್ಕಳೋ ತಿನ್ನಲು ಸಾಕಷ್ಟು ಆಹಾರ ಸಿಗದೆ, ದುರ್ಬಲ ರಾಗುತ್ತಿರುವರು. ಹೀಗೆ ಸಮಾಜದಲ್ಲಿ ಭಿನ್ನ ಭಿನ್ನ ಗೋತ್ರದವರು ವರು ಮದುವೆಯಾಗಬೇಕೆಂಬ ನಮ್ಮ ಧರ್ಮಶಾಸ್ತ್ರದ ಗುಟ್ಟೊ ಇದೆ. ಒಂದೇ ರಕ್ತದ ಸಂತಾನವು ಒಳ್ಳೆಯದಾಗದು. ಆದರೆ ಸಾಮ್ಯವಾದವು ಈ ಎಲ್ಲ ತೊಂದರೆಗಳನ್ನು ಹೊಡೆದೋಡಿಸುತ್ತದೆ. ಸ್ತ್ರೀಯರೂ ಪುರುಷರೂ

ಸ್ವತಂತ್ರರಿರುವ ಮೂಲಕ ತಮಗೆ ಯೋಗ್ಯರಾದವರನ್ನು ಪ್ರೇಮದಿಂದ ವರಿಸಲು ಅನುಕೂಲವಾಗುವದು. ಒಳ್ಳೇ ಸಶಕ್ತರಾದ ಸ್ತ್ರೀಪುರುಷರ ವಿವಾಹಕ್ಕೆ ಅನುಕೂಲತೆಯುಂಟಾಗಿ ರಾಷ್ಟ್ರದ ಸಂತಾನವು ಬಲವುಳ್ಳದ್ದಾಗುವದು. ರಾಷ್ಟ್ರವೇ ಮಕ್ಕಳ ಪಾಲನೆ ಪೋಷಣೆಯ ಭಾರವನ್ನು ಹೊರುವದರಿಂದ ಇಡೀ ಜನಾಂಗವೇ ಸಶಕ್ತವೂ ತೇಜೋಮಯವೂ ನಿರೋಗಿಯೂ ಆಗುವದರಲ್ಲಿ ಸಂದೇಹವಿಲ್ಲ.

**ಪತ್ರಿಕಾ ಪ್ರಪಂಚ—** ಶಾಲೆಕಾಲೇಜಗಳೂ, ಧರ್ಮಸಂಸ್ಥೆಗಳೂ ನ್ಯಾಯಾಸನಗಳೂ ಬಂಡವಲವಾದವನ್ನೇ ಸಮರ್ಥಿಸಿ, ನಮ್ಮ ಮನಸ್ಸಿನ ಮೇಲೆ, ಒಂದು ಬಗೆಯ ಪರಿಣಾಮವನ್ನುಂಟುಮಾಡುತ್ತವೆ. ಪತ್ರಿಕೆಗಳೂ ಇದೇ ಮಾರ್ಗದಲ್ಲಿಯವೇ ? ಆದರೆ, ಇವು ತೋರಿಸುವ ಕೈಗಳು ಮಾತ್ರ ಬಹು ವಿಚಿತ್ರ. ಮೇಲೆ ಮೇಲೆ ನೋಡಿದರೆ ಇವು ಬಡವರ ಕೈವಾರಿಗಳೆಂಬಂತೆ ಕಾಣುತ್ತವೆ. ಆದರೆ ಇಂದಿನ ವೃತ್ತಪತ್ರಿಕಾ ಪ್ರಪಂಚವೆಲ್ಲ ಬಹುತರ ಬಂಡವಲದಾರರ ಕೈಯಲ್ಲಿವೆ. 'ಅರ್ಥಸ್ಯ ದಾಸೋ ಪುರುಷಃ' ಎಂಬಂತೆ ಅವರನ್ನು ಎತ್ತಿಹಿಡಿಯುವದು, ಅವರ ಹಿತಸಂಬಂಧಗಳನ್ನು ರಕ್ಷಿಸಲು ದಕ್ಷವಾಗಿರುವದು, ಯಾವಾಗಲೂ ಕಂಡುಬರುತ್ತದೆ.

ಉದಾಹರಣೆಗಾಗಿ ಭಾರತದ ಸ್ವಾತಂತ್ರ್ಯವನ್ನೇ ತೆಗೆದುಕೊಳ್ಳೋಣ. ಎಲ್ಲ ವೃತ್ತಪತ್ರಗಳೂ ಏಕಮುಖವಾಗಿ, ಸ್ವಾತಂತ್ರ್ಯ ಬೇಕೆಂದು ಪ್ರತಿಪಾದಿಸುತ್ತವೆ. ಪರದೇಶ ವ್ಯಾಪಾರದ ನಿಯಂತ್ರಣವು ನಮ್ಮ ಆಧೀನದಲ್ಲಿರದ್ದೇ ಭಾರತದ ಬಡತನಕ್ಕೆ ಕಾರಣವೆಂದು ಸಾರುತ್ತವೆ. ಯಾಕಂದರೆ ಇದರಲ್ಲಿ ಬಂಡವಲದಾರರದೇ ಹಿತವಿದೆ. ಸ್ವರಾಜ್ಯ ಸಿಕ್ಕರೆ ೧೮ ವರ್ಷದ ಮೇಲಿನವರಿಗೆಲ್ಲ ಮತದಾನ ದೊರೆಯಬೇಕು ! ಆರ್ಥಿಕ ಅಸಮಾನತೆಯು ಹೋಗಬೇಕೆನ್ನಿರಿ, ಕೂಡಲೇ ಎಲ್ಲ ವೃತ್ತಪತ್ರಗಳು ಈಗಲೇ ಈ ವಿಚಾರಗಳು ಯೋಗ್ಯವಲ್ಲ. ಕ್ರಮೇಣ, ಸಾವಕಾಶವಾಗಿ ಒಂದೊಂದೇ ಹೆಜ್ಜೆಯನ್ನು ಹಾಕಬೇಕೆಂದು ಉಪದೇಶಿಸಲು ಪ್ರಾರಂಭಮಾಡುತ್ತವೆ. ಇಂಥ ಹಲವು ಉದಾಹರಣೆಗಳನ್ನು ಕೊಡ

ಬಹುದು. ಸಾಮ್ಯವಾದದ ಉದಯದೊಡನೆಯೇ ಈ ಭಟ್ಟಂಗಿತನವು ಹೋಗಿ, ರಾಷ್ಟ್ರದ, ಸಮಾಜದ ಕಲ್ಯಾಣಕ್ಕಾಗಿ ಪ್ರಚಾರಮಾಡುವ ಪವಿತ್ರಕಾರ್ಯವೊಂದೇ ಅವುಗಳಿಗೆ ಉಳಿಯುವದು.

ಹೀಗೆ ಸಾಮ್ಯವಾದವು ಜಗತ್ತಿನಲ್ಲಿ ಹಲವು ಬಗೆಯ ಚಮತ್ಕಾರ ಗಳನ್ನುಂಟುಮಾಡುತ್ತದೆ. ಆದರೆ ಇದೆಲ್ಲ ಯಾವಾಗ ? ಬಂಡವಲದಾರರ ರಾಜ್ಯವು ಅಳಿದು ಸಾಮ್ಯವಾದದ ಆಳಿಕೆಯು ಪ್ರಾರಂಭವಾದಾಗ.

ಆದರೆ ಅದನ್ನು ಬರಗೊಡದಂತೆಯೇ ಅನೇಕ ಆಕ್ಷೇಪಗಳನ್ನೆತ್ತಿ ಕುಗ್ಗಿಬಡಿಯುವ ಪ್ರಯತ್ನಗಳೇನೂ ಕಡಿಮೆಯಿಲ್ಲ. ಆದುದರಿಂದ ಇದರ ಬಗ್ಗೆ ಆಕ್ಷೇಪಗಳೇನು ? ಅವುಗಳಿಗೆ ಸಾಮ್ಯವಾದವು ಏನು ಉತ್ತರ ಕೊಡುವದು ಎಂಬುದನ್ನು ಮುಂದಿನ ಪ್ರಕರಣದಲ್ಲಿ ವಿವರಿಸುವೆವು.

---

# ಆಕ್ಷೇಪಕರಿಗೆ ಉತ್ತರಗಳು



೧೦

ಸಾಮ್ಯವಾದವು ಜಗತ್ತಿನ ಕಲ್ಯಾಣಕ್ಕೆ ಅತ್ಯಂತ ಹಾನಿಕಾರಕವೆಂದೂ ಜಗತ್ತಿನ ಸ್ವಾತಂತ್ರ್ಯವನ್ನೇ ಹರಣಮಾಡಿ, ಧರ್ಮವನ್ನು ಹಾಳು ಮಾಡುವದೆಂದೂ, ನೀತಿಯೆಲ್ಲವೂ ಮಣ್ಣುಗೂಡಿ, ಜಗತ್ತೇ ಅನೀತಿಮಯವಾಗುವದೆಂದೂ ಗುಲ್ಲೆಬ್ಬಿಸಿ, ಸಾಮ್ಯವಾದದ ವಿಷಯಕ್ಕೆ ಅಪಪ್ರಚಾರವನ್ನು ಮಾಡುತ್ತಲಿದ್ದಾರೆ. ಇವರ ಆಕ್ಷೇಪಗಳಾದರೂ ಏನು? ಅವುಗಳಲ್ಲಿ ಹುರುಳು ಎಷ್ಟಿದೆ? ಎಂಬುದನ್ನು ವಿಚಾರಮಾಡುವದು ಅತ್ಯಂತ ಅವಶ್ಯವಿದೆ.

**ಸಾಮ್ಯವಾದವು ಏನನ್ನು ಬಯಸುತ್ತದೆ**— ೧. ಶ್ರೀಮಂತರು ಬಡವರು ಎಂಬ ಭೇದವನ್ನಳಿದು ವ್ಯಕ್ತಿ ಒಡೆತನವನ್ನು ನಾಶಮಾಡಿ, ಧನೋತ್ಪಾದನೆಯ ಎಲ್ಲ ಸಾಧನಗಳ ರಾಷ್ಟ್ರೀಕರಣ ಮಾಡುವದು. ೨. ಪ್ರತಿಯೊಬ್ಬನಿಗೆ ಅವನ ಯೋಗ್ಯತೆಯಂತೆ ದುಡಿಮೆ ಕೊಡುವದು. ೩. ಜೀವನಕ್ಕೆ ಉಪಯುಕ್ತವಾದ ಸಾಧನಗಳನ್ನು ಯಂತ್ರಗಳಿಂದ ಹುಟ್ಟಿಸಿ, ಅವರವರ ಅಗತ್ಯಗಳಂತೆ ಎಲ್ಲರಿಗೂ ಸರಿಸಮಾನವಾಗಿ ಪೂರೈಸಿ, ಅವರ ಮಾನಸಿಕ ವಿಕಾಸಕ್ಕೆ ಅನುಕೂಲತೆಯನ್ನು ಮಾಡುವದು.

ಮೊದಲಿನ ಎರಡು ತತ್ವಗಳ ಮೇಲೆಯೇ ಎಲ್ಲರೂ ಗದೆ ಎತ್ತುವರು. ಅವರ ಆಕ್ಷೇಪಗಳು ಕೆಳಗಿನಂತಿವೆ—

೧. ಸಾಮ್ಯವಾದದಿಂದ ವ್ಯಕ್ತಿ ಸ್ವಾತಂತ್ರ್ಯವು ಹಾಳಾಗಿ ಜನಾಂಗವೆಲ್ಲವೂ ಕೈದಿಗಳಂತೆ, ರಾಷ್ಟ್ರದ ಆಜ್ಞೆಯಂತೆ ದುಡಿಯಬೇಕಾಗುವದು.

೨. ಆರ್ಥಿಕ ಸ್ವಾತಂತ್ರ್ಯದಿಂದ ಸ್ತ್ರೀಯರು ಸ್ವತಂತ್ರರಾಗಿ ಸ್ವೇಚ್ಛಾಚಾರವು ಬೆಳೆದು ಧರ್ಮವು ಹಾಳಾಗಿ ಅನೀತಿಯು ಬೆಳೆಯುವದು. ಕುಟುಂಬ ಜೀವನವು ಹಾಳಾಗುವದು. ಇಂದು ಸುಸಂಸ್ಕೃತವಾದ ಜೀವನವು ಪಶುಜೀವನದಂತಾಗುವದು.

೩. ಸರಿಸಮಾನವಾದ ಹಂಚುವಿಕೆಯಿಂದ ಮನುಷ್ಯರನ್ನೂ ಕತ್ತೆಗಳನ್ನೂ ಒಂದೇ ಮಾಡಿದಂತೆಯೇ ಸರಿ. ಮಾನಸಿಕ ವಿಕಾಸವು ಎಲ್ಲರಲ್ಲಿಯೂ ಒಂದೇಯಾಗಿರುವದಿಲ್ಲ. ಎಲ್ಲರನ್ನೂ ಒಂದೇ ಅಳತೆಗೋಲಿನಿಂದ ಅಳೆಯುವದೆಂದರೆ, ಪ್ರತಿಭಾಶಾಲಿಗಳ ಕೊಲೆಮಾಡಿದಂತೆಯೇ ಸರಿ. ಮಾನವ ಜನಾಂಗವು ಅವರ ಸೇವೆಯಿಂದ ವಂಚಿತವಾಗುವದು.

೪. ಸಾಮ್ಯವಾದಿಗಳಿಗೆ ಮಾನವಬುದ್ಧಿಯ ಪರಿಚಯವೇ ಇಲ್ಲ. ಇಲ್ಲದಿದ್ದರೆ ಅವರೆಂದಿಗೂ ಇಂಥ ಗಾಳಿಯನ್ನು ಗುದ್ದಿ ಮೈನೋಯಿಸಿಕೊಳ್ಳುವ ಕಾರ್ಯಕ್ಕೆ ಕೈಹಾಕುತ್ತಿದ್ದಿಲ್ಲ. ಕೆಲಕೆಲವು ಜನರಲ್ಲಿ ಸ್ವಾಭಾವಿಕವಾಗಿ, ಅಧಿಕಾರ ನಡೆಯಿಸುವ ಯೋಗ್ಯತೆ ಇರುತ್ತದೆ. ಸಾಮ್ಯವಾದದಲ್ಲಿ ಈ ನೈಸರ್ಗಿಕ ಗುಣಗಳನ್ನು ಬದಲುಮಾಡುವ ಏನಾದರೂ ಬಂಗಾಲಿ ತಂತ್ರವಿದೆಯೇ ?

೫. ಬಂಡವಲಗಾರರು ಕೇವಲ ಸುಲಿಗೆಗಾರರಲ್ಲ. ಕೂಲಿಕಾರರಂತೆ ದುಡಿಯಬೇಕಾಗುತ್ತದೆ. ಸಂಘಟನೆಮಾಡಬೇಕಾಗುತ್ತದೆ. ಹಣ ಪೂರೈಸಬೇಕಾಗುತ್ತದೆ. ಉತ್ಪತ್ತಿ ವಿನಿಮಯ ವಿತರಣಗಳಂಥ ಮಹತ್ವದ ಕಾರ್ಯಗಳನ್ನು ಕೈಕೊಳ್ಳಬೇಕಾಗುತ್ತದೆ. ಇದೇನು ಶ್ರಮವಲ್ಲವೆ ?

೬. ಸಂಸ್ಕೃತಿ ಹಾಗು ಕಲೆಗಳ ಸಂರಕ್ಷಣೆ, ಮತ್ತು ವಿಜ್ಞಾನದ ಬೆಳವಣಿಗೆಗೆ ಬಂಡವಲದಾರರು ಮತ್ತು ರಾಜಮಹಾರಾಜರು ಮುಖ್ಯ ಕಾರಣರಲ್ಲವೇ ? ಅವರಿಂದಲೇ ಇಷ್ಟು ಉನ್ನತಿಗೆ ಅವು ಬಂದಿಲ್ಲವೇ ? ಈ ವರ್ಗವನ್ನು ಹಾಳುಮಾಡುವದೆಂದರೆ, ಸಮಾಜದ ಸಂಸ್ಕೃತಿ ಕಲೆಗಳನ್ನು ನಾಶಮಾಡಿದಂತಾಗುವದಿಲ್ಲವೇ ? ಇತ್ಯಾದಿ—

ಈ ಎಲ್ಲ ಮಾತುಗಳಲ್ಲಿ ಹುರುಳು ಎಷ್ಟಿದೆ ಎಂಬುದನ್ನು ವಿಚಾರಿಸೋಣ. ವ್ಯಕ್ತಿಸ್ವಾತಂತ್ರ್ಯ, ವ್ಯಕ್ತಿಸ್ವಾತಂತ್ರ್ಯವೆಂದು ಕೂಗಾಡುವ

ಈ ಬಂಡವಲದಾರರ ರಾಜ್ಯದಲ್ಲಿ ವ್ಯಕ್ತಿಸ್ವಾತಂತ್ರ್ಯವೆಷ್ಟಿದೆ: ಎಷ್ಟು ಜನರಿಗೆ ಈ ಭಾಗ್ಯವು ದೊರೆತಿದೆ? ಸರ್ವ ಸ್ವಾತಂತ್ರ್ಯದ ಮೂಲವು ಆರ್ಥಿಕ ಸ್ವಾತಂತ್ರ್ಯವೆಂಬುದನ್ನು ನಾವು ಹಿಂದೆ ಸಿದ್ಧಮಾಡಿದ್ದೇವೆ. ಈ ಬಂಡವಲದಾರರ ರಾಜ್ಯದಲ್ಲಿ ಯಾರಿಗೆ ಸ್ವಾತಂತ್ರ್ಯವಿದೆ? ಯಾವನು ಧನವಂತನಿರುವನೋ ಅವನಿಗೆ ಮಾತ್ರ. ಬಹು ಸಂಖ್ಯಾಕ ಜನಾಂಗದ ಆರ್ಥಿಕ ಸ್ವಾತಂತ್ರ್ಯ ಹರಣಮಾಡಿ, ಅವರನ್ನು ಗುಲಾಮರನ್ನಾಗಿ ಮಾಡಿ ಪಶುಗಳಂತೆ ದುಡಿಸಿಕೊಳ್ಳುವವರಾರು? ಅನನ್ಯಗತಿಕರನ್ನು ಮಾಡಿದವರಾರು? ಇದು ಸ್ವಾತಂತ್ರ್ಯವೇ? ಇವರಿಗೆ ಒಂದು ಸ್ವಾತಂತ್ರ್ಯವಿದೆ ಎನ್ನಬಹುದು. ಯಾವುದೆಂದರೆ, ಪಾರತಂತ್ರ್ಯಕ್ಕೆ ಬೇಸತ್ತು ತುಡುಗಿನಿಂದ ಆತ್ಮಹತ್ಯೆಯನ್ನು ಮಾಡಿಕೊಳ್ಳುವದು. ಹೀಗೆ ಕೋಟ್ಯಾವಧಿ ಜನರ ಸ್ವಾತಂತ್ರ್ಯವನ್ನು ಹರಣಮಾಡುವ ಇವರು ಎಬ್ಬಿಸಿದ ವ್ಯಕ್ತಿಸ್ವಾತಂತ್ರ್ಯ ಹರಣವಾಗುವದೆಂಬ ಗುಲ್ಲು ತಿರುಕರ ತಿರಿಬೊಬ್ಬೆ. ಕೂಲಿಕಾರರಿಗೆ ಇವರು ಕೊಟ್ಟ ಸ್ವಾತಂತ್ರ್ಯವಿದು.

ಇವರು ಯಾವ ಕ್ಷೇತ್ರವನ್ನು ಹಾಳುಮಾಡಿಲ್ಲ! ಎಲ್ಲರನ್ನೂ ಧನದಿಂದ ಕೊಂಡು ಗುಲಾಮರನ್ನಾಗಿ ಮಾಡಿಕೊಂಡಿದ್ದಾರೆ. ವೃತ್ತಪತ್ರಗಳನ್ನು ತೆಗೆದುಕೊಳ್ಳಿರಿ! ಅವು ಇಂದು ಜನತೆಯ ಎದುರಿಗೆ ನಿಜವಾದ, ಸ್ವತಂತ್ರವಾದ ವಿಚಾರಗಳನ್ನೇ ಇಡುತ್ತವೆಯೇ? ಇಂಗ್ಲಂಡ ಅಮೇರಿಕಾ ಮೊದಲಾದ ಬಂಡವಲಶಾಹಿಯ ರಾಜ್ಯಗಳಲ್ಲೆಲ್ಲ ಕೋಟ್ಯಾಧೀಶರು ಅವುಗಳನ್ನು ತಮ್ಮ ಕೈಯೊಳಗಿನ ಗೊಂಬೆಗಳನ್ನಾಗಿ ಮಾಡಿಕೊಂಡಿಲ್ಲವೆ! ಸ್ವಾತಂತ್ರ್ಯಕ್ಕಾಗಿ ಹೋರಾಡುವ ಪತ್ರಗಳಿಗೆ ಈ ರಾಜ್ಯದಲ್ಲಿ ಉಳಿಗಾಲವಿದೆಯೆ? ಎಲ್ಲ ಪತ್ರಗಳು ಇಂದು ಬಂಡವಲದಾರರ ದಾಸರಾಗಿ ಅವರನ್ನು ಸ್ತುತಿಸುವ ಭಟ್ಟಂಗಿಗಳಲ್ಲವೆ? ಅಂದ ಮೇಲೆ ಎಲ್ಲಿದೆ ನಿಮ್ಮ ಸ್ವಾತಂತ್ರ್ಯ! ಹೋಗಲಿ.

ಎಷ್ಟು ಜನ ಕವಿಗಳನ್ನೂ, ಲೇಖಕರನ್ನೂ, ವಿದ್ವಾಂಸರನ್ನೂ ಬಂಡವಲದಾರರು ಕೊಂಡಿಲ್ಲ! ಸ್ವತಂತ್ರ ಜೀವನವನ್ನು ನಡೆಯಿಸಿ, ತಮ್ಮ ಲೆಕ್ಕಣಿಕೆಯನ್ನೂ ಬುದ್ಧಿಯನ್ನೂ ಮಾರದವರು ತೀರ ವಿರಳ. ಬಹು

ಸಂಖ್ಯಾಕರು ಜೀವಿತಕ್ಕಾಗಿ, ತಮ್ಮ ಪ್ರತಿಭೆಯನ್ನೂ ಮಾರಿ ಬಂಡವಲದಾರರನ್ನು ಹೊಗಳುವ ಕಾರ್ಯವನ್ನು ಕೈಕೊಂಡಿಲ್ಲವೆ? ಇದು ಸ್ವಾತಂತ್ರ್ಯವೇ?

ಜಗತ್ತನ್ನೇ ತಮ್ಮ ಬುದ್ಧಿಯಿಂದ ಕುಣಿಸಬಲ್ಲೆವೆಂದು ಹೆಮ್ಮೆ ಬಡುವ ರಾಜಕಾರಣಿಗಳನ್ನೇ ತೆಗೆದುಕೊಳ್ಳಿರಿ. ರಾಜನೀತಿಯು ಇಂದು ಬಂಡವಲದಾರರ ದಾಸಿಯಾಗಿದೆ. ಜಗತ್ತಿನಲ್ಲಿರುವ ಮಂತ್ರಿ ಮಂಡಳ ಗಳನ್ನು ನಾವು ನೋಡಿದರೆ, ಕಂಡು ಬರುವದು ಏನು? ಅವುಗಳಲ್ಲೆಲ್ಲ ..ರಣಿಗಳ ಮಾಲಕರು, ಬ್ಯಾಂಕರರು, ಜಮೀನದಾರರು, ರಾಜ್ಯಸೂತ್ರ ಚಾಲಕರು. ಇಂದಿನ ಶಾಸನ ಸಭೆಗಳ ಚುನಾವಣೆಗಳನ್ನು ನೋಡಿರಿ. ಕೇವಲ ದುಡ್ಡಿನ ಮೇಲೆಯೇ ನಡೆಯುತ್ತವೆ. ಕೇವಲ ಸ್ವತಂತ್ರವಾಗಿ, ಏನೂ ಹಣವಿಲ್ಲದೆ ನಡೆಯುವ ಚುನಾವಣೆಗಳು ತೀರ ಅಪರೂಪ. ಇಲ್ಲಿಯೂ ಕೂಡ ವೃತ್ತಪತ್ರಗಳು ಕೊಳ್ಳಲ್ಪಡುತ್ತವೆ. ಪ್ರವಾಸದ ಸಾಧನಗಳಾದ ವಾಹನಗಳು ಕೊಳ್ಳಲ್ಪಡುತ್ತವೆ. ಹಣವು ನೀರಿನಂತೆ ವೆಚ್ಚಮಾಡಲ್ಪಡುತ್ತದೆ. ಯಾವನ ಹತ್ತಿರ ಹಣವಿಲ್ಲವೋ ಅವನು ತನ್ನ ಗುಣದಿಂದ ಯೋಗ್ಯತೆಯಿಂದ ಆರಿಸಿ ಬರಲು ಶಕ್ಯವಿದೆಯೇ? ಒಬ್ಬ ಹಳ್ಳಿಯ ಹುಂಬನಿಗೂ ಕೂಡ,ದುಡ್ಡಿಲ್ಲದೆ ಜಯಸಿಗುವದು ಶಕ್ಯವಿಲ್ಲೆಂದು ಮನವರಿಕೆಯಾಗಿದೆ. ಇದು '**ಪ್ರಜಾಪ್ರಭುತ್ವ**' ರಾಜ್ಯಗಳ ಪರಿಸ್ಥಿತಿ. ಎಲ್ಲಿಯ ವರೆಗೆ ಒಂದು ವರ್ಗದಲ್ಲಿ ಅಪಾರವಾದ ಸಂಪತ್ತು, ಇನ್ನೊಂದು ವರ್ಗದ ಕೈಯಲ್ಲಿ ಭಿಕ್ಷಾಪಾತ್ರೆ ಇದೆಯೋ ಅಲ್ಲಿಯ ವರೆಗೆ, ಎಲ್ಲವನ್ನೂ ಅವರು ತಮ್ಮ ಧನಬಲದಿಂದ ಕೊಂಡು ದಾಸರನ್ನಾಗಿ ಮಾಡಿಕೊಳ್ಳು ವವರೇ! ಇಂಥ ರಾಜ್ಯದಲ್ಲಿ ಸ್ವಾತಂತ್ರ್ಯ, ವ್ಯಕ್ತಿಸ್ವಾತಂತ್ರ್ಯವೆಂಬುದು ಶುದ್ಧ ಮೋಸ.

ಇದು ಪ್ರಜಾಪ್ರಭುತ್ವದ ಹಾಡಾಯಿತು. ಇನ್ನು ರಾಜರ ರಾಜ್ಯ ದಲ್ಲಿಯಂತೂ ಕೇಳಲಿಕ್ಕೆ ಬೇಡ. ಹೇಳಿ ಕೇಳಿ ಬಂಡವಲದಾರರ ರಾಜ್ಯ. ಅಲ್ಲಿ ಸ್ವಾತಂತ್ರ್ಯ ವ್ಯಕ್ತಿ ಸ್ವಾತಂತ್ರ್ಯವೆಂಬ ಶಬ್ದಗಳೇ ಇಲ್ಲ.

ಇನ್ನು ಧರ್ಮಕ್ಷೇತ್ರಗಳನ್ನಷ್ಟು ನೋಡಿಬರೋಣ! ಅಲ್ಲಿ ಏನಿದೆ,

ಧರ್ಮಗುರುಗಳು, ಪುರೋಹಿತರು, ಮೌಲವಿಗಳು, ಪಾದ್ರಿಗಳು, ಸ್ವತಂತ್ರವಿರುವರೋ ? ವ್ಯಕ್ತಿ ಸ್ವಾತಂತ್ರ್ಯವನ್ನು ಅನುಭೋಗಿಸುತ್ತಿರುವರೋ? ಪಾಪ ಅವರ ಅಸ್ತಿತ್ವವೇ ಬಂಡವಲದಾರರ ಕೃಪಾಛತ್ರದಮೇಲೇ. ಮಠಗಳು ಮಶೀದೆಗಳು ಚರ್ಚುಗಳೆಲ್ಲವೂ ಬಂಡವಲದಾರರ ದಾನದಿಂದ ನಡೆಯುವಂಥವು, ಅಂದ ಮೇಲೆ ಎಲ್ಲಿದೆ ಸ್ವಾತಂತ್ರ್ಯ, ವ್ಯಕ್ತಿಸ್ವಾತಂತ್ರ್ಯ? ಕೈಯಲ್ಲಿ ದೀವಟಿಗೆ ತೆಗೆದುಕೊಂಡು ಯಾವ ಮೂಲೆಯಲ್ಲಿ ಹುಡುಕಿದರೂ ಈ ಬಂಡವಲದಾರರ ರಾಜ್ಯದಲ್ಲಿ ವ್ಯಕ್ತಿಸ್ವಾತಂತ್ರ್ಯ, ಸ್ವಾತಂತ್ರ್ಯಗಳೆಂಬುವು ಇಲ್ಲ. ಸ್ವಾತಂತ್ರ್ಯವು ಹರಣವಾಗುವದು ಯಾರದು? ಕೈಬೆರಳಿನ ಮೇಲೆ ಎಣಿಸುವಷ್ಟು ಇರುವ ಈ ಬಂಡವಲದಾರರದು.

ಆದರೆ ಸಾಮ್ಯವಾದದ ರಾಜ್ಯದಲ್ಲಿ ಈ ಬಂಡವಲದಾರರ ರಾಜ್ಯಕ್ಕಿಂತಲೂ ವ್ಯಕ್ತಿ ಸ್ವಾತಂತ್ರ್ಯ, ಸ್ವಾತಂತ್ರ್ಯಗಳು ಹೆಚ್ಚೆಂಬುದನ್ನು ಎದೆ ತಟ್ಟಿ ಹೇಳಬಲ್ಲೆವು. ಅದನ್ನು ತೋರಿಸಿದರೆ, ನಮ್ಮ ಸಿದ್ಧಾಂತದ ಮಂಡನವಾದಂತಾಯಿತು.

ಸಾಮಾಜಿಕ ಜೀವನವು ಸುಗಮವಾಗಿ ಸಾಗಬೇಕಾದರೆ, ಸಮಾಜದ ಘಟಕಗಳಾದ ಎಲ್ಲ ವ್ಯಕ್ತಿಗಳು ಕೆಲವೊಂದು ನಿಯಮಗಳಂತೆ ನಡೆಯಬೇಕಾಗುವದು. ಮನಬಂದಂತೆ ವರ್ತಿಸಿದರೆ, ಸಮಾಜವೇ ಬಾಳಲಾರದು. ಸಮಾಜದ ಹಿತದ ವಿರುದ್ಧವಾಗಿ ವರ್ತಿಸಲು ಯಾವನಿಗೂ ಅಧಿಕಾರವಿಲ್ಲ. ಅದು ಮಾನವ ಜಾತಿಯ ದ್ರೋಹ. ಇದು ವಿವೇಕವುಳ್ಳವರಿಗೆಲ್ಲ ತಿಳಿಯುವ ಸಾಮಾನ್ಯಮಾತು.

ಮಗುವಿಗೆ ಮೈಲಿ (ಸಿಡುಬ) ಬೇನೆ ಬರಲೊಲ್ಲದೇಕೆ ನಾನು ಮೈಲೀ ತೆಗೆಸುವವನಲ್ಲವೆಂದವನಿಗೆ, ಈ ಬೇನೆಯು ಒಬ್ಬರಿಂದ ಒಬ್ಬರಿಗೆ ಹಬ್ಬುವದು. ಅನೇಕ ಜನರ ಆಹುತಿ ತೆಗೆದುಕೊಳ್ಳುವದು ಆದ್ದರಿಂದ ನೀನು ಮೈಲಿ ತೆಗೆಯಿಸಲಿಕ್ಕೇಬೇಕು ಎಂದು ಹೇಳಬೇಕಾಗುವದು. ರಾಷ್ಟ್ರದ ದೃಷ್ಟಿಯಿಂದ ಇಂಥದನ್ನು ತಡೆಯುವದು ಕರ್ತವ್ಯವಾಗುವದು. ಹಾಗೆಯೇ ದೀಪವಿಲ್ಲದೆ ಮೋಟರು ಹೊಡೆಯುವದನ್ನು ನಿಲ್ಲಿಸಬೇಕಾ

ಗುವದಿಲ್ಲವೇ ? ಆದರಂತೆಯೇ ಕರೆಬಡಕರು, ಕಳ್ಳರು ತಮ್ಮ ಸ್ವಾತಂತ್ರ್ಯ ಹರಣ ಮಾಡುತ್ತೀರಿ ಎಂದರೆ, ಏನು ಅರ್ಥ ! ಬಾಯಿಯಿಂದ ಮಾತಾಡಲು ಬರುತ್ತದೆಂದು ಎಲ್ಲರನ್ನೂ ಬಯ್ಯುತ್ತೇನೆಂದರೆ, ಅವರನ್ನು ಹುಚ್ಚರ ಆಸ್ಪತ್ರಿಗೆ ಕಳಿಸಬೇಕಾಗುವದು. ಅಂದರೆ ಸಾಮಾಜಿಕ ಜೀವನವು ಸಾಗಲಿಕ್ಕೆ ಕೆಲವೊಂದು ನಿಯಮಗಳು ಬೇಕು. ಅವುಗಳನ್ನು ನಾವು ಪಾಲನೆ ಮಾಡಲಿಕ್ಕೇ ಬೇಕು.

ವ್ಯಕ್ತಿಸ್ವಾತಂತ್ರ್ಯವೆಂದರೆ ಸ್ವೈರಾಚಾರವಲ್ಲ. ಸಮಾಜದ ಹಿತಕ್ಕೆ ಭಂಗಬರದಂತೆ ನಡೆಯುವದೇ ವ್ಯಕ್ತಿಸ್ವಾತಂತ್ರ್ಯ. ವ್ಯಕ್ತಿಸ್ವಾತಂತ್ರ್ಯವು ಹಾಳಾಗುವದೆಂದು ಕೂಗುವ ರಾಜ್ಯಗಳಲ್ಲಿ ಕೂಡ ಇಂಥ ಕೆಲವು ನಿಯಮಗಳು ಇದ್ದೇ ಇರುವವು. ಇದೇ ನಿಯಮದಂತೆ, ಸಮಾಜದ ಸಂಬಂಧವನ್ನು ಅನುಲಕ್ಷಿಸಿ ಸಾಮ್ಯವಾದವು ಸಮಾಜದ ವ್ಯಕ್ತಿ ಒಡೆತನವನ್ನು ನಾಶಮಾಡುವದು. ಧನೋತ್ಪಾದನೆಗಾಗಿ ದುಡಿಯದಿದ್ದವನಿಗೆ, ರಾಷ್ಟ್ರೀಯ ಉತ್ಪನ್ನದಲ್ಲಿ ಪಾಲು ಇಲ್ಲೆಂದು ಸಾಮ್ಯವಾದೀ ಸರಕಾರವು ಸಾರುತ್ತದೆ. ದುಡಿಯದೆ, ಉಳಿದವರ ಶ್ರಮದ ಲಾಭವನ್ನು ತೆಗೆದುಕೊಳ್ಳಲು ಯಾರಿಗೆ ಅಧಿಕಾರವಿದೆ ? ತೆಗೆದುಕೊಂಡರೆ, ಅದು ಕಳುವು. ಆದ್ದರಿಂದ ದುಡಿಯದವರನ್ನು ದುಡಿಯಲೇ ಬೇಕೆಂದು ನಿರ್ಬಂಧಿಸುವದು, ಕಳ್ಳನನ್ನು ಸೆರೆಮನೆಗೆ ಕಳಿಸುವಷ್ಟೇ ನ್ಯಾಯವಾದದ್ದು. ಇದರಲ್ಲಿ ಯಾವ ಅನ್ಯಾಯವೂ ಇಲ್ಲ.

ಸಾಮ್ಯವಾದದ ರಾಜ್ಯದಲ್ಲಿಯೇ ವ್ಯಕ್ತಿಸ್ವಾತಂತ್ರ್ಯವು ನಿಜವಾಗಿ ಹೆಚ್ಚಿರುತ್ತದೆ. ಎಲ್ಲರೂ ಧನೋತ್ಪಾದನೆಗಾಗಿ, ತಮ್ಮ ಬಲವಿನಂತೆ, ಕಾರ್ಯವನ್ನು ಕೈಕೊಂಡು, ತಾವೇ ಗೊತ್ತುಪಡಿಸುವ ವೇಳೆಯ ವರೆಗೆ, ದುಡಿಯುವರು. ದುಡಿಯುವ ವೇಳೆಯನ್ನು ಬಿಟ್ಟು, ಉಳಿದ ಸಮಯವನ್ನು ಮನರಂಜನೆಯಲ್ಲಿ ಕಳೆಯಲು ಸ್ವತಂತ್ರರಿರುವರು. ವ್ಯಕ್ತಿಸ್ವಾತಂತ್ರ್ಯದ ಹರಣವೆಲ್ಲಿ ? ಆದರೆ ಇದರ ವಿರುದ್ಧವಾಗಿ, ಬಂಡವಲದಾರರ ರಾಜ್ಯದಲ್ಲಿ, ತಮಗೆ ಇಷ್ಟಬಂದ ಕಾರ್ಯಮಾಡಲು ಸ್ವಾತಂತ್ರ್ಯವಿಲ್ಲ. ದುಡಿತದ ವೇಳೆಯನ್ನು ನಿರ್ಣಯಿಸುವ ಅಧಿಕಾರವು ಬೇರೊಬ್ಬರ ಕಡೆಗೆ,

ದುಡಿದರೂ ಹೊಟ್ಟೆಬಟ್ಟೆಗೆ ಸಾಕಷ್ಟು ವೇತನವಿಲ್ಲ. ಮೇಲೆ ಮಕ್ಕಳ, ಹಾಗು ಮುಪ್ಪಿನಕಾಲದ ಚಿಂತೆ. ಅಂದಮೇಲೆ ಸ್ವಾತಂತ್ರ್ಯವು, ವ್ಯಕ್ತಿ ಸ್ವಾತಂತ್ರ್ಯವು ಯಾವ ರಾಜ್ಯದಲ್ಲಿ ?

ಇಷ್ಟೇ ಅಲ್ಲ. ಈ ರಾಜ್ಯದಲ್ಲಿ ರೂಢಿಯು ಬಲವಾನ ದಬ್ಬಾಳಿಕೆಯು ಕಾನೂನುಗಳಿಗಿಂತ ವ್ಯಕ್ತಿಸ್ವಾತಂತ್ರ್ಯವನ್ನು ಹೆಚ್ಚಾಗಿ ಹರಣಮಾಡು ತ್ತದೆ. ಬಂಡವಲವಾದದ ರಾಜ್ಯದಲ್ಲಿ ಈ ದುಷ್ಟ ರೂಢಿಗಳ ಪ್ರಾಬಲ್ಯ ಬಹಳ ವೆಂಬುದನ್ನು ಹಿಂದೆಯೇ ವರ್ಣಿಸಿದ್ದೇವೆ. ಬಡವನು ಹೊಟ್ಟೆಗಾಗಿ, ಗುಲಾಮನಾಗಿ, ಸ್ವಾತಂತ್ರ್ಯವನ್ನು ಕಳೆದುಕೊಂಡಿದ್ದರೆ, ಶ್ರೀಮಂತನು ರೂಢಿಯ ದಾಸನಾಗಿ ಪರತಂತ್ರನಾಗಿದ್ದಾನೆ. ಸಾಮ್ರಾಜ್ಯಕ್ಕೆ ಅಧಿಕಾರಿ ಯಾದ ೮ನೇ ಎಡ್ವರ್ಡ ಬಾದಶಹರಿಗೆ, ತಮ್ಮ ಮನಸ್ಸಿಗೆ ಬಂದವಳನ್ನು ವರಿ ಸುವ ಸ್ವಾತಂತ್ರ್ಯವಿರಲಿಲ್ಲ. ಅಂದ ಮೇಲೆ ಉಳಿದವರ ಪಾಡೇನು ? ತಮ್ಮ ಪ್ರೇಯಸಿಯು ತಮ್ಮ ವರ್ಗದವಳೇ ಇರಬೇಕೆಂದು ರೂಢಿಯು ನಿರ್ಬಂಧಿ ಸುವದು. ನೋಡಿರಿ ಇದೆಂಥ ಸ್ವಾತಂತ್ರ್ಯ? ಇಷ್ಟೇ ಅಲ್ಲ, ವೇಷ ಭೂಷಣಗಳಲ್ಲಿ ಕೂಡ ರೂಢಿಯು ವ್ಯಕ್ತಿಸ್ವಾತಂತ್ರ್ಯವನ್ನು ಹರಣ ಮಾಡುತ್ತಿದೆ. ಪಾಶ್ಚಾತ್ಯರಂತೆ ಉಡುವು ತೊಡುವುಗಳನ್ನು ಮಾಡಬೇ ಕೆಂಬುದೊಂದು,ದರ್ಬಾರದ ರೂಢಿ.ನಮ್ಮ ದೇಶಕ್ಕೆ ಅವು ಅನುಕೂಲವಿರಲಿ, ಇಲ್ಲದಿರಲಿ, ನಮ್ಮ ಮನಸ್ಸಿಲ್ಲದಿದ್ದರೂ ಅವನ್ನು ಮಾಡೇ ತೀರಬೇಕು ರೂಢಿಯು ರಾಜ್ಯದಲ್ಲಿ. ಇಲ್ಲದಿದ್ದರೆ ಮರ್ಯಾದೆಯಿಲ್ಲ. ಹೀಗೆ ಉಡುಪಿ ನಿಂದ ಹೆಂಡತಿಯ ವರೆಗೆ ತಮ್ಮ ವ್ಯಕ್ತಿ ಸ್ವಾತಂತ್ರ್ಯವನ್ನು ಕಳೆದು ಕೊಂಡು ರೂಢಿಯ ಗುಲಾಮರಾಗಿ ವರ್ತಿಸುವದಿಲ್ಲವೇ ಈ ರಾಜ್ಯದಲ್ಲಿ ? ಹೀಗಿದ್ದು ಸ್ವಾತಂತ್ರ್ಯದ ಜಂಭವೇಕೆ ! ಸಾಮ್ಯವಾದವು ಈ ವರ್ಗಭೇದವನ್ನು ಕಿತ್ತೊಗೆದು ಕೀಳು ಮೇಲೆಂಬ ಭಾವನೆಗಳನ್ನು ಮಣ್ಣುಗೂಡಿಸಿ, ಸಮಾ ಜವನ್ನು ರೂಢಿಯ ಹಾಗೂ ಆರ್ಥಿಕ ದಬ್ಬಾಳಿಕೆಯಿಂದ ಮುಕ್ತಮಾಡಿ, ಸರ್ವತಂತ್ರ ಸ್ವತಂತ್ರರನ್ನಾಗಿ ಮಾಡುವದು. ಈ ಸಾಮ್ಯವಾದಿ ರಾಜ್ಯ ದಲ್ಲಿ ಬೇಕಾದವರು ಬೇಕಾದವರನ್ನು ಮದುವೆಯಾಗಬಹುದು. ಬೇಕಾದ ಉಡುಪನ್ನು ಉಡಬಹುದು. ತನ್ನ ದುಡಿಮೆಯನ್ನು ತಾನು ನಿರ್ಣಯಿಸಿ ಕೊಳ್ಳಬಹುದು. ತನಗೆ ಇಷ್ಟಬಂದುದನ್ನು ಕಲಿಯಬಹುದು. ಅಂದ

ಮೇಲೆ, ವ್ಯಕ್ತಿಸ್ವಾತಂತ್ರ್ಯವು ನಷ್ಟವಾಗುವದೆಂಬ ಮಾತಿನಲ್ಲಿ ಎಷ್ಟು ಹುರುಳು ಇದೆ ಎಂಬುದು ಮೇಲೆಯೇ ಕಾಣುತ್ತದೆ.

ಇನ್ನು ಎರಡನೇ ಪ್ರಶ್ನೆ. ಸ್ತ್ರೀಯರು ಆರ್ಥಿಕ ದೃಷ್ಟಿಯಿಂದ ಸ್ವತಂತ್ರರಾಗುವದರಿಂದ ಪುರುಷರ ವಶಕ್ಕೆ ಉಳಿಯುವದಿಲ್ಲ. ಸ್ವೇಚ್ಛಾಚಾರಿಗಳಾಗುವರು; ಕುಟುಂಬಜೀವನವು ಹಾಳಾಗುವದು ಎಂಬುದೇ ಇವರಕೂಗು. ಬಂಡವಲವು ರಾಷ್ಟ್ರೀಕರಣವಾಗುವದೆಂದು ಎಂದೊಡನೆಯೇ ಬಂಡವಲಗಾರರು ನಡುಗುವಂತೆ ಸ್ತ್ರಿಯರು ಮುಕ್ತರಾಗುವರೆಂದ ಕೂಡಲೆ ಪುರುಷರ ಮೈಯಲ್ಲಿ ಛಳಿಕಟ್ಟುವದು.

ಅನೀತಿ ಅನೀತಿ ಎಂದು ಕೂಗುವ ಈ ನೀತಿವಂತರ ರಾಜ್ಯದಲ್ಲಿ ಏನು ನಡೆದದೆ? ಸ್ತ್ರಿಯು ಇವರ ಭೋಗ್ಯವಸ್ತುವು. ತಮ್ಮ ಕಾಮತೃಪ್ತಿಗಾಗಿ ಸ್ತ್ರೀಜೀವನದ ಬಲಿದಾನ. ಸದಾಚಾರ, ಸದಾಚಾರವೆಂದು ನುಡಿಯುವ ಈ ಸಮಾಜದಲ್ಲಿ ನಡೆದ ಅತ್ಯಾಚಾರವು ಮೈನಡುಗಿಸುತ್ತದೆ. ಇಂದಿನ ಸಮಾಜದಲ್ಲಿ ವ್ಯಭಿಚಾರವು ಯಾವ ರೀತಿಯಲ್ಲಿರುವದೆಂಬುದನ್ನು ಬೇರೆ ಹೇಳಬೇಕಿಲ್ಲ. ಸಾವಿರಾರು ಶಿಶುಗಳು ಕೊಲ್ಲಲ್ಪಟ್ಟು, ಬೀದಿಯಲ್ಲಿ ಎಸೆಯಲ್ಪಡುತ್ತಲಿವೆ. ಇವೆಲ್ಲವೂ ಧರ್ಮ ಧರ್ಮವೆಂದು ಕೂಗುವ ಧರ್ಮಮಾರ್ತಾಂಡರಿಗೆ, ಸತ್ಕೃತ್ಯಗಳೇ ? ಧನಬಲದಿಂದ, ಲಕ್ಷಾವಧಿ ಸ್ತ್ರೀಯರ ಪಾತಿವ್ರತ್ಯವು ಈ ಸಿರಿವಂತರ ಕಾಮತೃಷ್ಣೆಗೆ ಬಲಿಯಾಗುತ್ತಲ್ಲವೇ ? ಧರ್ಮಧುರಂಧರರೆಂದೆನಿಸಿಕೊಂಡ ರಾಜಮಹಾರಾಜರ ಅರಮನೆಗಳಲ್ಲಿ ಏನು ನಡೆದಿದೆ? ಅವರ ರಾಣೀವಾಸದ ದುರ್ಗಂಧವು, ಅನೀತಿಯು, ಜಗತ್ತನ್ನೇ ಅಪವಿತ್ರಗೊಳಿಸುತ್ತಲಿದೆ.

ಇಂಥವರು ನೀತಿಯ ಉಪದೇಶಕರು; ಮಾರ್ಗದರ್ಶಕರು. ಆದರೆ ಸಾಮ್ಯವಾದವು ಇಂಥದನ್ನು ಎಂದೂ ಸಹನಮಾಡುವದಿಲ್ಲ. ಯಾರನ್ನೂ ಮೋಸಗೊಳಿಸಲು ಇಚ್ಛಿಸುವದಿಲ್ಲ. ಸ್ತ್ರೀಪುರುಷರಿಬ್ಬರೂ ಪ್ರತಿಜ್ಞಾಭಂಗವಾಗದಂತೆ ನಡೆಯಲು ಕಲಿಸುತ್ತದೆ. ಧನದ ಮೋಹದಿಂದ ಸ್ತ್ರೀಯು ವಂಚಿತಳಾಗದಂತೆ ಮಾಡುತ್ತದೆ. ಸಾಮ್ಯವಾದೀ ರಾಜ್ಯದಲ್ಲಿ ಪ್ರಲೋಭನ, ಬಲಾತ್ಕಾರಗಳಿಗೆ ಎಡೆಯಿಲ್ಲದಿರುವದರಿಂದ ನಿಜವಾದ ಪ್ರೇಮವಿವಾಹಗಳಾಗುತ್ತವೆ.

ಸ್ತ್ರೀಯು ಸ್ವತಂತ್ರವಾದೊಡನೆ, ಧರ್ಮಗ್ಲಾನಿ ಏಕಾಗಬೇಕು? ಪಂಜರದೊಳಗಿನ ಗಿಳಿಯು ಹೊರಬಿದ್ದೊಡನೆಯೇ ಕೆಲಕಾಲ ಅತ್ತಿಂದಿತ್ತ ಹಾರಾಡಬಹುದು; ಆದರೆ, ಅದು ಸ್ಥಿರವಾದ ಜೀವನವಲ್ಲವೆಂಬುದನ್ನು ಎಲ್ಲರೂ ಲಕ್ಷ್ಯದಲ್ಲಿಡಬೇಕು. ರಶಿಯದಲ್ಲಿ ಕೆಲವು ಕಾಲ, ಪ್ರಾರಂಭದಲ್ಲಿ ಕೆಲವು ಸ್ತ್ರೀಯರು ಮಾಡಿದ ಅತ್ಯಾಚಾರಗಳ ಕಡೆಗೆ ಬೊಟ್ಟುಮಾಡಿ ತೋರಿಸಬಹುದು. ಆದರೆ ಅದು ತಾತ್ಕಾಲಿಕ ಎಂಬುದನ್ನು ಮರೆಯ ಬಾರದು. ಈಗಿದ್ದ ನೀತಿಯು ಸಮಾಜದಲ್ಲಿ ಸೂಳೆಗೇರಿತನವಿಲ್ಲವೆ? ಆದರೆ ಅದೇ ರಶಿಯದಲ್ಲಿ ಇಂದೇನಿದೆ? ಪ್ರೇಮವಿವಾಹಗಳು ಜರುಗುತ್ತಲಿವೆ. ಕುಟುಂಬಗಳು ಬಾಳುತ್ತಲಿವೆ. ವಿವಾಹ ವಿಚ್ಛೇದಗಳು ತೀರ ಕಡಿಮೆ. ಇದರಿಂದ ಕುಟುಂಬದ ನಾಶ ಹೇಗಾಗುತ್ತದೆ?

ಸಾಮ್ಯವಾದೀ ಸರಕಾರದಲ್ಲಿ ಯಾವುದೇ ಸ್ತ್ರೀಪುರುಷರು ಲಗ್ನ ವಾಗದೆ ಕೂಡಿ ಇರಲಾಗದು. ಯಾಕಂದರೆ, ರಾಷ್ಟ್ರದ ಜನಸಂಖ್ಯೆ ಯನ್ನು ಉತ್ಪತ್ತಿಯಂತೆ ನಿಯಂತ್ರಿಸಬೇಕಾಗುತ್ತದೆ. ಸಜ್ಞಾನ ಸ್ತ್ರೀ ಪುರುಷರು ಕೂಡಿರುವದಾದರೆ ಅವರಿಬ್ಬರೂ ಲಗ್ನವಾಗಲೇಬೇಕು. ಲಗ್ನಕ್ಕೆ ಹಣದ ವೆಚ್ಚವಿಲ್ಲ. ರಜಿಸ್ಟರ ಮಾಡಿದರೆ ಆಯಿತು, ಇಬ್ಬರೂ ಮನಸ್ಸು ಇರುವವರೆಗೆ ಕೂಡಿ ಇರಬಹುದು. ಒಬ್ಬರಿಗೆ ಬೇಡವಾದರೆ ಬೇಕಾದವರು ಸೋಡಚೀಟಿ ಕೊಡಬಹುದು. ಒಬ್ಬನನ್ನು ಬಿಟ್ಟು ಬೇರೊಬ್ಬನನ್ನು ಕೂಡಲೇ ವರಿಸಬಹುದು. ಒಬ್ಬನನ್ನು ವರಿಸಿದಾಗ ಇನ್ನೊಬ್ಬನೊಡನೆ ಸಂಬಂಧ ಬೆಳೆಯಿಸುವದು ವ್ಯಭಿಚಾರವು.

ಕಾಯದೆಯಂತೆ ಈ ರಾಜ್ಯದಲ್ಲಿ ವ್ಯಭಿಚಾರವಿಲ್ಲೆಂದು ಹೇಳಿದರೂ ಮೊದಲಿನ ಗಂಡನಿಂದ ಹುಟ್ಟಿದ ಮಕ್ಕಳ ಗತಿಯೇನು? ಅವರ ರಕ್ಷಣೆಯ ಭಾರವು ಯಾರಮೇಲೆ? ಕುಟುಂಬ ಜೀವನವು ನಾಶವಾದಂತೆ ಆಗಲಿ ಲ್ಲವೆ? ಇದು ನೀತಿಗೆ ಸಮ್ಮತವೆ? ಎಂದು ಕೇಳಬಹುದು.

ಇಂದಿನ ಮಕ್ಕಳ ಸಂರಕ್ಷಣೆಯ ಭಾರವು ಯಾರಮೇಲಿದೆ? ಅವರ ತಂದೆ ತಾಯಿಗಳು ಅವರ ಆಹಾರಕ್ಕೆ ದೊರಕಿಸಲು ಶಕ್ತರಿಲ್ಲದಲ್ಲಿ ಅವ ರನ್ನು ಯಾರು ಪೋಷಿಸುತ್ತಾರೆ? ಸಾಮ್ಯವಾದೀ ಸರಕಾರದಲ್ಲಿ ದೇಶದ

ಮಕ್ಕಳ ಸಂರಕ್ಷಣೆಯನ್ನೆಲ್ಲ ರಾಷ್ಟ್ರವು ಹೊರುತ್ತದೆ. ಮಕ್ಕಳು ಹುಟ್ಟಿದೊಡನೆಯೆ ಸರಕಾರವು ಅವರ ವೆಚ್ಚಕ್ಕೆಂದು ಅವರ ತಾಯಿಗೆ ಹಣವನ್ನು ಸಲ್ಲಿಸುತ್ತದೆ. ಅವರು ಎಂಟು ವರ್ಷದವರಾದ ಬಳಿಕ ರಾಷ್ಟ್ರೀಯ ಶಿಕ್ಷಣಾಲಯಗಳಲ್ಲಿ ಸೇರಿಸಿ ಶಿಕ್ಷಣ ಕೊಡುತ್ತದೆ.

ದೇಶವೇ ಒಂದು ಕುಟುಂಬದಂತಿರುವ ಸಾಮ್ಯವಾದೀ ಸರಕಾರದಲ್ಲಿ ವಿಕ್ಷಿಪ್ತ ಕೆಲ ಜನರು ಕುಟುಂಬವನ್ನು ಹಾಳುಮಾಡಿಕೊಂಡರೆ ಅದು ಅವರ ತಪ್ಪು. ವಿವಾಹವಿಚ್ಛೇದಕ್ಕೆ ಕಾರಣವಾದ ಎಲ್ಲ ತೊಂದರೆಗಳನ್ನು ಸಾಮ್ಯವಾದವ ನಾಶಮಾಡುವದರಿಂದ ಕುಟುಂಬ ಜೀವನಕ್ಕೆ ಒಳ್ಳೇ ಸಹಾಯ. ಇಂಥ ರಾಜ್ಯದಲ್ಲಿ ಕುಟುಂಬಿಗಳಾಗದವರು ಎಂಥ ರಾಜ್ಯದಲ್ಲಿಯೂ ಆಗರು. ಇಂಥಲ್ಲಿ ಕುಟುಂಬ ಹಾಳಾದರೆ ಹೆಂಡತಿಯು ಗಂಡನನ್ನೊ, ಗಂಡನು ಹೆಂಡತಿಯನ್ನೊ ಚನ್ನಾಗಿ ಮನವೊಲಿಸಿ ಇಟ್ಟುಕೊಳ್ಳಲು ಬಾರದೆಂದೇ ಸಿದ್ಧವಾಗುವದು. ಸತಿಪತಿಗಳನ್ನು ಜುಲುಮೆಯಿಂದ ಕೂಡಿ ಇಡಲು ಒತ್ತಾಯಪಡಿಸಿದರೆ ಸೌಖ್ಯವಾಗದು. ಆದುದರಿಂದಲೆ ನಿರ್ಬಂಧವಿಲ್ಲ. ಇಬ್ಬರೂ ಪ್ರೇಮದಿಂದ ವರ್ತಿಸಿದರೇ ನಿಜವಾದ ಕುಟುಂಬ ಸೌಖ್ಯ. ಅದನ್ನೇ ಸಾಮ್ಯವಾದವು ಒದಗಿಸಿಕೊಡುತ್ತದೆ. ರಶಿಯದ ಇಂದಿನ ಅನುಭವವನ್ನೇ ಹೇಳಬೇಕಾದರೆ ಬಹುಸಂಖ್ಯಾಕ ಕುಟುಂಬಗಳು ಸ್ಥಿರವಾಗಿ ಬಾಳುತ್ತಲಿವೆ.

**ಸರಿಯಾಗಿ ಹಂಚುವಿಕೆ**—ಈ ಪ್ರಶ್ನೆಯು ಅತ್ಯಂತ ಮಹತ್ವದ್ದು. ಎದುರಾಳಿಗಳು ಇದರ ಮೇಲೆಯೇ ಪ್ರತ್ಯಕ್ಷವಾಗಿ ಆಘಾತಮಾಡುತ್ತಾರೆ. ವಿತರಣದ ಪ್ರಕರಣದಲ್ಲಿ ಸರಿಯಾಗಿ ಹಂಚುವ ಪದ್ಧತಿಗಿಂತಲೂ ಯಾವ ಪದ್ಧತಿಯೂ ನಿರ್ದುಷ್ಟವಾಗಿಲ್ಲವೆಂಬುದನ್ನು ವಿಶದೀಕರಿಸಿದೆ. ಆದರೂ ಈ ಪ್ರಶ್ನೆಯನ್ನು ಇನ್ನಷ್ಟು ವಿಮರ್ಶಕ ದೃಷ್ಟಿಯಿಂದ ಹಿಂಜಿ ಹಿಂಜಿ ನೋಡೋಣ.

ಸರಿಯಾಗಿ ಎಲ್ಲರಿಗೂ ಹಂಚುವದೆಂದರೇನು? ಮನುಷ್ಯನನ್ನೂ ಕತ್ತೆಯನ್ನೂ ಒಂದೇ ಮಾಡಿದಂತೆಯೇ ಸರಿ. ಮುತ್ಸದ್ದಿಗಳಾದ ಮಂತ್ರಿಗಳಿಗೂ ಅಷ್ಟೆ! ಬೀದಿ ಉಡುಗುವ ಆಳಿಗೂ ಅಷ್ಟೇ! ಎಂಜನಿಯರನಿಗೂ

ಅಷ್ಟೆ! ಬೆವರು ಸುರಿಸುವ ಕಮ್ಮಾರನಿಗೂ ಅಷ್ಟೆ! ಒಳ್ಳೇ ನಟಿಗೂ ಅಷ್ಟೆ! ಮುಸುರೆ ತಿಕ್ಕುವ ಒಕ್ಕಲಗಿತ್ತಿಗೂ ಅಷ್ಟೆ! ಇದು ಎಂದಾದರೂ ನಡೆಯುವ ಮಾತೆ? ಅವ್ಯವಹಾರ್ಯವಾದ ಮೂರ್ಖತನದ ಸಂತೆ.

ಹೀಗಾದರೆ, ಶ್ರಮವನ್ನು ಮಾಡಲು ಏಕೆ ಸಿದ್ಧರಾಗುವರು? ಕೆಟ್ಟ ಕೆಲಸಗಳನ್ನು ಮಾಡಲು ಯಾರು ಮುಂದೆ ಬರುವರು? ಶ್ರಮಬಡುವದು ಬೇಡ. ಹೆಚ್ಚು ಗಳಿಸಲು ಬೇಕು. ಎಂಬುದೇ ಮನುಷ್ಯನ ಪ್ರವೃತ್ತಿ. ಅಂದಮೇಲೆ, ಡಾಕ್ಟರ, ಇಂಜನಿಯರ, ಮೊದಲಾದ ಉದ್ಯೋಗಗಳ ಸಲುವಾಗಿ ಯಾರು ಕಲಿಯಲು ಮುಂದೆ ಬರುವರು? ಏಕೆ ಬರಬೇಕು? ಇದರಿಂದ ಸಮಾಜಕ್ಕೆ ಉಪಯುಕ್ತವಾದ ಯಾವ ಕಾರ್ಯವೂ ನಡೆಯದೆ, ಹಾಳಾಗುವ ಪ್ರಸಂಗಬರುವದು. ಇತ್ಯಾದಿ ಆರೋಪ.

ಸಾಮ್ಯವಾದವು ಕೇವಲ ವಿಕಾರವಂತರ ವಿಚಾರಗಳಲ್ಲವೆಂಬುದನ್ನು ಟೀಕಾಕಾರರು ಲಕ್ಷ್ಯದಲ್ಲಿಡಬೇಕು. ಸಾಮ್ಯವಾದವು ಅಧಿಕಾರಾರೂಢವಾದಾಗ, ಆದ ಸಮಾಜದ ಬದಲಾದ ಮನೋಭೂಮಿಕೆಯನ್ನು ಚನ್ನಾಗಿ ತಿಳಿದುಕೊಳ್ಳಬೇಕು. ಮಾನಸಶಾಸ್ತ್ರದ ಸಿದ್ಧಾಂತಗಳ ಮೇಲೆಯೇ ಸಾಮ್ಯವಾದವು ತನ ಕಟ್ಟಡವನ್ನು ಕಟ್ಟುತ್ತದೆ.

ಸರಿಯಾಗಿ ಹಂಚಬೇಕೆಂದೊಡನೆ ಏಕೆ ಬೆದರುವರೋ ತಿಳಿಯದು. ಈಗ ಯಾವ ಪದ್ಧತಿಯು ರೂಢಿಯಲ್ಲಿದೆ? ಒಂದೊಂದು ವರ್ಗದವರಿಗೆ ಸರಿಯಾದ ಸಂಬಳವು ಇಲ್ಲವೆ? ಶಿಕ್ಷಕರಿಗೂ, ಕಾರಕೂನರಿಗೂ, ಡಾಕ್ಟರರಿಗೂ ಅವರವರ ವರ್ಗದಲ್ಲಿ ಸರಿಯಾದ ಸಂಬಳವು ದೊರೆಯುವದಿಲ್ಲವೆ? ಅಲ್ಲಿಯೂ ಬುದ್ಧಿವಂತನು ಧಡ್ಡನು ಎಂಬ ಭೇದಗಳು ತೋರುವದಿಲ್ಲವೆ? ಅಂದಮೇಲೆ ಅದು ಹೇಗೆ ನಡೆದಿದೆ? ಇದನ್ನೇ ವಿಸ್ತರಿಸಿ ಸಾಮ್ಯವಾದವು ಎಲ್ಲರಿಗೂ ಸಮನಾಗಿ ದೊರೆಯಬೇಕೆಂದರೆ ಯಾವ ಅಪರಾಧವನ್ನು ಮಾಡಿದಂತಾಯಿತು? ಯಾವ ಹೊಸ ಮಾತನ್ನು ಹೇಳಿದಂತಾಯಿತು! ಸಾಮ್ಯವಾದವು ಅನ್ನುವದಿಷ್ಟೆ! ನಾವೆಲ್ಲರೂ ಮಾನವರು. ದೇವರು ನಮ್ಮನ್ನು ಹುಟ್ಟಿಸುವಾಗ ಇವನು ದರಿದ್ರನು, ಇವನು ಶ್ರೀಮಂತನು

ಎಂದು ಹುಟ್ಟಿಸಿಲ್ಲ. ಎಲ್ಲರಿಗೂ ಪ್ರಕೃತಿಯ ಧರ್ಮದಂತೆ ತಿನ್ನುಣ್ಣಲು ಬೇಕು. ಈ ಕೃತ್ರಿಮವಾದ ವರ್ಗಭೇದವು ನಾಶವಾಗಿ, ಎಲ್ಲರೂ ಸಮನಾಗಿ ಹಂಚಿಕೊಳ್ಳಬೇಕೆಂದರೆ ತಪ್ಪೇನು ? ಈಗಿದ್ದ ಪದ್ಧತಿಯನ್ನೇ ವಿಸ್ತರಿಸಿ ವಿಶ್ವವ್ಯಾಪಿ ಮಾಡಲು ಸಾಮ್ಯವಾದವು ಬಯಸುತ್ತದೆ.

ಯಾವುದೇ ಕಾರ್ಯವು ಒಳ್ಳೇ ರೀತಿಯಿಂದ ಸಾಗಬೇಕಾದರೆ, ಆ ಕಾರ್ಯಕ್ಕೆ (Incentive of work) ಉತ್ತೇಜನ ದೊರೆಯಲೇ ಬೇಕು, ಎಂಬ ಮಾತನ್ನು ಸಾಮ್ಯವಾದಿಗಳು ಪೂರ್ಣ ಬಲ್ಲರು. ಉತ್ತೇಜನವೆಂದರೆ ಕೇವಲ ಹಣವೆಂಬ ಕಲ್ಪನೆಯನ್ನು ತೆಗೆದುಹಾಕಬೇಕು. ಹಣವು ಹೊಟ್ಟೆಬಟ್ಟೆಗಾಗಿ ಬೇಕಾದುದರಿಂದ ಮಾನವನು ಅದನ್ನು ದೊರಕಿಸಲು ಯತ್ನಿಸುವನು. ಯಾವ ರಾಜ್ಯದಲ್ಲಿ ಹೊಟ್ಟೆಬಟ್ಟೆಯ ಚಿಂತೆ ಇಲ್ಲವೋ ಅಲ್ಲಿ ಹಣಸಂಗ್ರಹದ ಕಲ್ಪನೆಯೇ ಇರುವದಿಲ್ಲೆಂಬುದನ್ನು ಹೇಳಲಿಕ್ಕೆ ಬೇಡ. ಆ ಸಮಾಜದಲ್ಲಿ ಉತ್ತೇಜನವು ಬೇರೆ ರೂಪವನ್ನು ತಾಳುವದು. ಸಾಮ್ಯವಾದಿಗಳು ವಿಶ್ರಾಂತಿಯನ್ನೇ ಉತ್ತೇಜನ ರೂಪವಾಗಿ ಉಪಯೋಗಿಸುವರು. ಭಿನ್ನ ಭಿನ್ನ ಕಾರ್ಯಗಳ ಪ್ರಮಾಣದಿಂದ ವಿಶ್ರಾಂತಿಯನ್ನು ಉಪಯೋಗಿಸಿದರೆ ಕಾರ್ಯಕ್ಕೆ ಉತ್ತೇಜನ ದೊರೆತು ಅವು ಸುಸೂತ್ರವಾಗಿ ನಡೆಯಲು ಅನುಕೂಲವಾಗುತ್ತದೆ.

ಗಿರಣಿಯಲ್ಲಿಯ ಕೆಲಸಮಾಡುವವರಿಗೆ, ೬ ತಾಸು ದುಡಿಯಬೇಕಾದರೆ, ಚಿಕ್ಕತಕ್ಕಡಿಯ ಅಂಗಡಿಯಲ್ಲಿ ಕುಳಿತು ಚಾಟುಗೋಷ್ಠಿಗಳನ್ನಾಡುತ್ತಕಾರ್ಯಮಾಡುವವನು ೧೦ ತಾಸು ದುಡಿಯಬೇಕು. ಹೀಗೆಯೇ ಚಿತ್ರಪಟ ತೋರಿಸುವವನು ೮ ತಾಸು ಕೆಲಸ ಮಾಡಿದರೆ ಭಂಗಿ ಕೆಲಸ ಮಾಡುವವನು ೩ ತಾಸು. ಹೀಗೆ ಕಾರ್ಯಗಳ ವರ್ಗೀಕರಣ ಮಾಡಿ ಕೆಲಸದ ಅವಧಿಯನ್ನು ನಿರ್ಣಯಿಸಿದರೆ ಅವರವರ ರುಚಿಯಂತೆ ಎಲ್ಲ ಕೆಲಸಗಳಿಗೂ ಜನರು ಮುಂದೆ ಬರುವರು. ಇಲ್ಲಿ ವಿಶ್ರಾಂತಿಯೇ ಉತ್ತೇಜನವಿರುವದರಿಂದ ದುಡ್ಡು ಮಾಡುವ ಕಾರ್ಯವನ್ನು ವಿಶ್ರಾಂತಿಯು ಮಾಡುತ್ತದೆ. ಯಾಕಂದರೆ ಈ ಸಮಾಜದಲ್ಲಿ ವಿಶ್ರಾಂತಿಯ ಉಪಯೋಗವು ಮಾನವನ ಬೆಳವಣಿಗೆಗೆ ಉಪಯೋಗವಾಗುತ್ತದೆ.

ಹೀಗೆಂದರೆ, ಕೆಲವು ಕಾರ್ಯಗಳನ್ನು ಅತ್ಯಂತ ಶ್ರಮವಹಿಸಿ ದೀರ್ಘಕಾಲ ಮಾಡಲೇಬೇಕಾಗುತ್ತದೆ. ಉದಾಹರಣೆಗಾಗಿ, ಗ್ರಂಥ ಬರೆಯೋಣ, ಶೋಧಗಳನ್ನು ಮಾಡೋಣ, ಇತ್ಯಾದಿ ಕೆಲಸಗಳಲ್ಲಿ ಬಹಳ ಕಾರ್ಯ ಮಾಡಬೇಕಾಗುತ್ತದೆ. ಇವರಿಗೇನು ಉತ್ತೇಜನ? ರಾಷ್ಟ್ರದ ಜೀವನಕ್ಕೆ ಅವಶ್ಯವಿರುವ ಎಲ್ಲ ಕಾರ್ಯಗಳಿಗೂ ರಾಷ್ಟ್ರವು ಉತ್ತೇಜನ ಕೊಡಲೇಬೇಕು. ಇಂಥ ಶೋಧಕರ, ವಿಜ್ಞಾನಿಗಳ, ಗ್ರಂಥಕರ್ತರ ಎಲ್ಲ ಭಾರವನ್ನು ರಾಷ್ಟ್ರವು ಹೊತ್ತು ಅವರಿಗೆ ಬೇಕಾದ ಅನುಕೂಲತೆಗಳನ್ನು ಒದಗಿಸಿಕೊಡುವದು ಎಂದು ಸಾಮ್ಯವಾದವು ಎದೆತಟ್ಟಿ ಹೇಳುತ್ತದೆ.

ಆದರೂ ಟೀಕಾಕಾರರು ಅನ್ನುವದೇನಂದರೆ, ಮನುಷ್ಯನ ಸ್ವಭಾವವು ಯಾವಾಗಲೂ ಇದ್ದಂತೆಯೇ ಇರುವದು. ಮತ್ತೊಬ್ಬರಿಗಿಂತ ತಾನು ಕೀಳನು ಎಂದು ತಿಳಿಯಲು ಯಾರು ಸಿದ್ಧರಿರುತ್ತಾರೆ? ಆದ್ದರಿಂದ ಕೇವಲ ವಿಶ್ರಾಂತಿಯು ಉತ್ತೇಜನವಾಗಲಾರದು. ಹೇಸಿ ಕೆಲಸಕ್ಕೆ ಯಾರೂ ಮುಂದೆ ಬಾರರು. ಅದರಂತೆ, ವೈಜ್ಞಾನಿಕ ಶೋಧಕರೂ ರಾಜಕಾರಣ ಪಟುಗಳೂ ಆಗಲಿಕ್ಕೆ ದೀರ್ಘಕಾಲದ ಪ್ರಯತ್ನ ಬೇಕಾಗುವದರಿಂದ ಯಾರೂ ಆ ಕೆಲಸಕ್ಕೆ ಕೈಹಾಕರು. ಇದರಿಂದ ರಾಷ್ಟ್ರಕ್ಕೆ ಮೇಧಾವಿಗಳ ಕೊರತೆಯಾಗಿ ರಾಷ್ಟ್ರವು ಅಧೋಗತಿಗೆ ಇಳಿಯುವದು.

ಮನುಷ್ಯನ ಸ್ವಭಾವವು ಇದ್ದಂತೆ ಇರುವದರಿಂದಲೇ ಸಾಮ್ಯವಾದೀ ಸರಕಾರದಲ್ಲಿ ಕೂಡ ಮೇಧಾವಿಗಳ ಕೊರತೆ ಬೀಳುವದಿಲ್ಲ. ಮಾನವನ ಸ್ವಭಾವವನ್ನು ಶಾಸ್ತ್ರೀಯ ರೀತಿಯಿಂದ ವಿಮರ್ಶಿಸಿದರೆ, ಅವನು ಕೇವಲ ದುಡ್ಡಿಗಾಗಿ ಮುಂದೆ ಬರುತ್ತಾನೆ ಎಂಬುದು ಭ್ರಮೆಯಾಗುವದು. ಅವನಲ್ಲಿ ಬುದ್ಧಿ, ಅಂತಃಕರಣ, ಮಹತ್ವಾಕಾಂಕ್ಷೆ, ಕೀರ್ತಿಯ ಲಾಲಸೆ, ಆದರ್ಶ ಮೊದಲಾದ ಗುಣಗಳಿವೆ. ಅವುಗಳಿಗಾಗಿ ಅವನು ಧಡಪಡಿಸುತ್ತಿರುವನು. ನಮ್ಮ ದೇಶದ ಉದಾಹರಣೆಯನ್ನೇ ತೆಗೆದುಕೊಂಡರೆ, ಸಾವಿರಾರು ಜನರು ತಮ್ಮ ಸಂಪತ್ತಿನ ಮೇಲೆ ತಿಲಾಂಜಲಿಯನ್ನು ಬಿಟ್ಟು ದೇಶಸೇವೆಯನ್ನು ಕೈಕೊಂಡಿಲ್ಲವೇ? ಕೇವಲ ಸಂಬಳ ಹೆಚ್ಚು ಕೊಡುತ್ತಿರುವದರಿಂದಲೇ ಒಳ್ಳೇ ಮಂತ್ರಿಗಳೂ, ಸರ್ಜನರೂ, ಸೇನಾಪತಿ

ಗಳೂ ಮುಂದೆ ಬರುತ್ತಾರೆಂದು ತಿಳಿಯುವದು ಶುದ್ಧ ಭ್ರಮೆಯು. ಅದೊಂದೇ ಕಾರಣವಾಗಿದ್ದರೆ, ಕಾಂಗ್ರೆಸ ಮಂತ್ರಿಮಂಡಳವು ಅಲ್ಪ ವೇತನಕ್ಕೇಕೆ ಮುಂದೆ ಬಂದಿತು? ಅವಿಶ್ರಾಂತವಾಗಿ, ನಿದ್ದೆನೀರಡಿಕೆ ಗಳಿಲ್ಲದೆ ರಾಷ್ಟ್ರದ ಸಲುವಾಗಿ ದುಡಿಯುತ್ತಿರುವ ಮಹಾತ್ಮರಿಗೆ ಎಷ್ಟು ಸಂಬಳವಿದೆ? ಅದರಂತೆಯೇ ಸತ್ಯಾಗ್ರಹದಲ್ಲಿ ಸೇರಿದವರೆಲ್ಲರೂ ಎಷ್ಟು ಸಂಬಳ ಸಿಗುತ್ತದೆಂದು ಸೇರಿದರು? ಅದೆಷ್ಟು ಸಾಹಿತಿಗಳು ಹೊಟ್ಟೆಗೆ ಅನ್ನವಿಲ್ಲದಿದ್ದರೂ, ಪ್ರೈ ಪ್ರಾಪ್ತಿಯಾಗದಿದ್ದರೂ, ಸಾಹಿತ್ಯಸೇವೆಯನ್ನು ಮಾಡುತ್ತಿರುವದಿಲ್ಲ!

ಹೀಗೆಯೇ ವಿಚಾರ ಮಾಡಿದರೆ, ಕೇವಲ ಹಣವೊಂದೇ ಮಾನವನ ಆಕರ್ಷಕವಲ್ಲ. ಭಿನ್ನ ಭಿನ್ನ ಶಕ್ತಿಗಳುಂಟು. ಆದರ್ಶಕ್ಕಾಗಿ, ಕೀರ್ತಿ ಗಾಗಿ, ಮರ್ಯಾದೆಗಾಗಿ ಮಾನವನು ಕಾರ್ಯರಂಗಕ್ಕಿಳಿಯುವನು. ಇಂದಿನ ಬಂಡವಲಶಾಹಿಯು, ಧನವನ್ನೇ ಈ ಎಲ್ಲ ಶಕ್ತಿಗಳ ಕೇಂದ್ರವನ್ನು ಮಾಡಿದ್ದರಿಂದ ಅವನು ಅತ್ತ ಧಾವಿಸುವನು. ಈ ಗುಟ್ಟನ್ನು ಅರಿತ ಸಾಮ್ಯವಾದವು ಇಂದು ಆ ಕೇಂದ್ರವನ್ನೇ ನಾಶಮಾಡಿ ಮಾನವನ ನೈಸರ್ಗಿಕ ಪ್ರವೃತ್ತಿಗಳಿಗೆ ಪ್ರಚೋದನ ಕೊಡಲು ಬಯಸುತ್ತದೆ.

ಮಾನವನು ಆದರ್ಶಕ್ಕಾಗಿ ಪ್ರಯತ್ನಿಸುವ ಪ್ರಾಣಿಯು. ಅದಕ್ಕಾಗಿ ಬೇಕಾದಂಥ ಕಷ್ಟಬಂದರೂ ಸಹಿಸಲು ಸಿದ್ಧನಾಗುವನು. ಆದುದರಿಂದ ಸಾಮ್ಯವಾದೀ ರಾಜ್ಯದಲ್ಲಿ ಕೂಡ ಮೇಧಾವಿಗಳು, ಧ್ಯೇಯ ವಾದಿಗಳು, ಆದರ್ಶ ಜೀವಿಗಳು, ಮಹತ್ವಾಕಾಂಕ್ಷಿಗಳು, ದೇಶಸೇವಕರು, ರಾಷ್ಟ್ರಪ್ರೇಮಿಗಳು, ಮುಂದೆ ಬಂದೇ ಬರುವರು. ಆರ್ಥಿಕ ವಿಷಮತೆಯು ಕಾರ್ಯಕ್ಕೆ ಪ್ರವೃತ್ತ ಮಾಡುವದೆಂಬ ಮಾತು ಎಷ್ಟು ಜೊಳ್ಳಾಗಿದೆ ಎಂಬುದು ಮೇಲೆಯೇ ಕಾಣುವದು. ಒಂದು ಪರೀಕ್ಷೆಯಲ್ಲಿ ಮೊದಲು ಬಂದವನಿಗೆ ಮೆಚ್ಚು ಇಟ್ಟರೆ ಎಷ್ಟು ವಿದ್ಯಾರ್ಥಿಗಳು ಅದನ್ನು ದೊರಕಿಸಲು ಯತ್ನಿಸುತ್ತಾರೆ! ಯೋಗ್ಯತೆಯುಳ್ಳ ಮಹತ್ವಾಕಾಂಕ್ಷಿ ಗಳಾದ ಕೆಲವರು ಮಾತ್ರ ಮೆಚ್ಚು ಇರದೆ ಇದ್ದರೂ ತಾವು ಮೊದಲು ನಂಬರು ಬರಬೇಕೆಂದು ಯತ್ನಿಸುವವರೇ! ಆದುದರಿಂದ ಸರಿಯಾದ

ಉತ್ಪನ್ನದಿಂದ ಯೋಗ್ಯತೆಯುಳ್ಳ ಜನರು "ನಮಗೇನು ಹೆಚ್ಚಿನ ಲಾಭ" ಎಂದು ಮುಂದೆ ಬರುವದಿಲ್ಲೆಂಬ ಮಾತಿನಲ್ಲಿ ಅರ್ಥವಿಲ್ಲ. ಇಷ್ಟೇ ಅಲ್ಲ. ಈಗ ದುಡ್ಡಿದ್ದವನೇ ದೊಡ್ಡವ. ಯೋಗ್ಯತೆಯುಳ್ಳವನಿದ್ದರೂ ಬಡವ ನಾಗಿದ್ದರೆ, ಮುಂದೆ ಬರಲು ಅವಕಾಶವಿಲ್ಲ. ಸರಿಯಾಗಿ ಎಲ್ಲರಿಗೂ ಉತ್ಪನ್ನವಾದರೆ, ಎಲ್ಲರಿಗೂ ಸರಿಯಾದ ಅವಕಾಶ ದೊರೆತು, ಜನರು ತಮ್ಮ ಯೋಗ್ಯತೆಯ ಪ್ರಕಾರ ಮುಂದೆ ಬರಲು ಅನುಕೂಲತೆ ಯಾಗುವದು.

ಈಗ ಒಬ್ಬ ಲಕ್ಷಾಧೀಶನು ಪಸೂ ಗೊತ್ತಿರದಿದ್ದರೂ ಗಿರಣಿಯಲ್ಲಿ ಡಾಯರೆಕ್ಟರನಾಗುವನು. ಅದೇ ಚುರುಕು ಬುದ್ಧಿಯ ಬಡವನು ಡಾಯರೆಕ್ಟರನಾಗುವ ಬುದ್ಧಿ ಇದ್ದರೂ ಅದು ವ್ಯರ್ಥ. ಆದರೆ ಅದೇ ಸರಿಸಮಾನವಾದ ಉತ್ಪನ್ನವಾದರೆ, ಯಾರಲ್ಲಿ ಯೋಗ್ಯತೆ ಇರುವದೋ ಅವರೇ ಮುಂದೆ ಬರುವರು. "ಗುಣಾಃ ಪೂಜಾಸ್ಥಾನಂ ಗುಣಿಷು ನ ಚ ಲಿಂಗಂ, ನ ಚ ವಯಃ" ಎಂದು ದುಡ್ಡಿನ ಪೂಜೆ ತಪ್ಪಿ ಗುಣಿಗಳ ಪೂಜೆಗೆ ಪ್ರಾರಂಭವಾಗುವದು. ಇದೇ ನಿಜವಾದ ಮಾನವನ ಪ್ರಗತಿಯ ಮಾರ್ಗವಲ್ಲವೇ !

ಇನ್ನು ಹೇಸಿಕೆಲಸಕ್ಕೆ ಯಾರು ಮುಂದೆ ಬರುವರು, ಎಂಬ ಪ್ರಶ್ನೆಗೆ ಉತ್ತರ ಕೊಟ್ಟರೆ ತೀರಿತು.

ನಿಜವಾಗಿಯೂ ವಿಚಾರಮಾಡಿದರೆ, ಯಾವ ಕಾರ್ಯದಲ್ಲಿಯೂ ಕೀಳುಮೇಲೆಂಬುದಿಲ್ಲ. ಸಮಾಜದ ಭಾವನೆಯ ಮೇಲೆಯೇ ಅದು ನಿರ್ಣಯಿಸಲ್ಪಡುತ್ತದೆ. ಇಂದು ಕೀಳೆಂದು ತಿಳಿಯಲ್ಪಡುವ ಉದ್ಯೋ ಶವು ನಾಳೆ ಮರ್ಯಾದೆಯುಳ್ಳದ್ದೆಂದು ತಿಳಿಯಲ್ಪಡಬಹುದು. **ಮಾನ ವನ ಜೀವನಕ್ಕೆ ಉನ್ನತಿಗೆ ಅವಶ್ಯವಿರುವ ಎಲ್ಲ ಕಾರ್ಯಗಳೂ ಪವಿತ್ರವೇ!** ಅದನ್ನು ಅವನು ಮಾಡಲೇ ಬೇಕು. ಹೀಗಿದ್ದರೆ ಇಂದ್ಯ ಯಾವದೊಂದು ಕೆಲಸವು ಹೇಸಿಕೆ ಎಂದು ಏಕೆನಿಸುತ್ತದೆ? ಅದರ ಬಗೆ ತಿರಸ್ಕಾರವೇಕೆ? ಈಗ ಹೊಲಸು ಕೆಲಸಗಳು ಹೊಲಸು ರೀತಿಯಲ್ಲಿ ಅಶಿಕ್ಷಿತರಿಂದ ನಡೆಯಿಸಲ್ಪಡುತ್ತಿರುವದರಿಂದ ಆ ಕೆಲಸಗಳ ಬಗ್ಗೆ

ಜಿಗುಪ್ಸೆ. ಆ ಕೆಲಸ ಮಾಡುವದೆಂದರೆ ಅಪಮಾನ; ಸಮಾಜದಲ್ಲಿ ಕೀಳೆಂಬ ಭಾವನೆ. ಭಂಗಿಯ ಕೆಲಸಕ್ಕೆ ಇಂದು ಅಪಮಾನ. ಆದರೆ ಮನೆಯಲ್ಲಿ ಮಕ್ಕಳ ಹೊಲಸನ್ನು ತಾಯಿಯು ಆನಂದದಿಂದ ತೆಗೆಯು ವಳು. ಇದಕ್ಕೆ ಯಾರೂ ಏನೂ ಅನ್ನುವದಿಲ್ಲ. ಈ ಕೆಲಸಕ್ಕೆ ಇಂದು ಯಾರೂ ಸಿದ್ಧರಾಗಲಿಕ್ಕಿಲ್ಲ. ಆದರೆ ಡಾಕ್ಟರರ ಕೆಲಸಕ್ಕೆ ನಾ ಮುಂದೆ ನೀ ಮುಂದೆ ಎಂದು ಮುಂದೆ ಬರುವದಿಲ್ಲವೆ? ಆದರೆ ಇವರ ಕೆಲಸವೆಂತ ಹದು ? ಹೊಲಸುಳ್ಳ ಹುಣ್ಣುಗಳನ್ನು ತೊಳೆಯುವದು. ಮಾಂಸ, ಕೀವು ಗಳನ್ನು ಸ್ವಚ್ಛಮಾಡುವದು ಇರುವದಿಲ್ಲವೆ? ಈ ಇಬ್ಬರ ಕಾರ್ಯಗಳಲ್ಲೂ ಅಂತರವೇನು ? ಹೆಣ ಕೊಯ್ಯುವ ಡಾಕ್ಟರನ ತಿರಸ್ಕಾರವಿಲ್ಲ; ಆದರೆ ಹೆಣ ಹೊರುವವನು ಮಾತ್ರ ಅಸ್ಪೃಶ್ಯ! ಸೂಲಗಿತ್ತಿಯ ಕೆಲಸಕ್ಕೆ ಡಾಕ್ಟರಿಣಿ ಎಂದು ಬಹುಮಾನ. ಅದೇ ಮುಸುರೆ ತೊಳೆಯುವ ಒಕ್ಕಲಗಿತ್ತಿಯ ಬಗ್ಗೆ ತಿರಸ್ಕಾರ. ಹೀಗೆ ಒಂದು ಕೆಲಸ ಮೇಲು, ಒಂದು ಕೆಲಸ ಕೀಳು ಎಂದು ತಿಳಿಯುವದು ನಮ್ಮ ದೃಷ್ಟಿಕೋನದಿಂದಲ್ಲದೆ ಕಾರ್ಯ ದಿಂದಲ್ಲ. ಇಂದು ಸನ್ಮಾನ್ಯವೆನಿಸುವದೇ ನಾಳೆ ನಿಂದ್ಯವೆನಿಸಬಹುದು. ಒಂದು ಕಾಲಕ್ಕೆ ಪೌರೋಹಿತ್ಯಕ್ಕೆ ಇದ್ದ ಮರ್ಯಾದೆಯು ಇಂದು ಮಾಯವಾಗಿದೆ. ಇಪ್ಪತ್ತುವರ್ಷಗಳ ಹಿಂದೆ ಖಾದಿಟೊಪ್ಪಿಗೆ ಹಾಕಿಕೊಳ್ಳು ವವನು ಕಳ್ಳನೆನಿಸುತ್ತಿದ್ದನು. ಅವನೇ ಇಂದು ದೇಶಭಕ್ತನು. ಅದನ್ನು ಹಾಕದವನೇ ಅಪರಾಧಿ. ಖಾನಾವಳಿಯನ್ನು ಹಾಕುವದು ಒಂದು ಕಾಲಕ್ಕೆ ಕ್ಷುಲ್ಲಕವೆಂದು ತಿಳಿಯಲ್ಪಡುತ್ತಿದ್ದುದು ಇಂದು ಸನ್ಮಾನೀಯ ಉದ್ಯೋಗವಾಗಿದೆ. ಅವರನ್ನು ಯಾರೂ ಕೀಳರೆಂದು ಭಾವಿಸುವದಿಲ್ಲ. ಭಂಗಿ ಕೆಲಸವು ರಾಷ್ಟ್ರದ ಸೇವೆಯಾದಾಗ ಪವಿತ್ರ ಕಾರ್ಯವಾಗು ವದು. ಹೀಗೆ ನಮ್ಮ ದೃಷ್ಟಿಕೋನವೇ ಅವುಗಳ ಮೇಲು ಕೀಳುಗಳಿಗೆ ಮೂಲ. ಮತ್ತು ಅದನ್ನು ಕೈಕೊಳ್ಳುವವರ ಮೇಲೆಯೂ ಅದು ಅವಲಂಬಿಸಿರುತ್ತದೆ.

ನೀವು ಏನೇ ಹೇಳಿರಿ, ಕೆಲವು ಕೆಲಸಗಳು ಅತ್ಯಂತ ಹೇಸಿ ಇರು ತ್ತವೆ. ಅವುಗಳನ್ನು ಕೈಕೊಳ್ಳುವವರಾರು ? ನಿಜ. ಇರಬಹುದು. ಆದರೆ ಅವುಗಳನ್ನು ಕೈಕೊಂಡಾಕ್ಷಣಕ್ಕೆ ಅವನು ಕೀಳನಾಗನೆಂಬುದೇ ನಮ್ಮ

ಸಿದ್ಧಾಂತ. **ಯಾಕೆಂದರೆ ರಾಷ್ಟ್ರದ ಜೀವನಕ್ಕೆ ಉಪಯುಕ್ತವಾದ ಎಲ್ಲ ಕಾರ್ಯಗಳೂ** ಪವಿತ್ರವೇ. ಅವುಗಳನ್ನು ನಾವು ಮಾಡಿಯೇ ತೀರಬೇಕು. ಹೇಸಿ ಕೆಲಸಗಳಿಗೆ, ಬುದ್ಧಿವಂತರು ಕೈಹಾಕಿದರೆ ಅವುಗಳ ಹೊಲಸುತನವು ಕಾರ್ಯಕ್ಕೆ ವಿಘ್ನವಾಗದಂತೆ, ಹೊಲಸುತನವು ಕಡಿಮೆಯಾಗ ವಂತೆ ಈ ಕಾರ್ಯಗಳಿಗೆ, ಯಂತ್ರಗಳನ್ನು ನಿರ್ಮಿಸಿ ಉಪಯೋಗಿಸಬಹುದು. ಕಸಗೂಡಿಸುವ ಕಾರ್ಯವನ್ನು ಏನೂ ಹೊಲಸು ಹತ್ತದಂತೆ ಮೋಟಾರಿನಿಂದ ಮಾಡಿಸಿಕೊಳ್ಳಬಹುದು. ಇದರಂತೆಯೇ ಉಳಿದ ಕಾರ್ಯ. ಹೀಗಾಗುವದರಿಂದ ಅನೇಕ ಬುದ್ಧಿವಂತರು ವಿಶ್ರಾಂತಿಯ ದೆಸೆಯಿಂದ ಮುಂದೆ ಬರಬಹುದು. ಈಗ ಹೆಚ್ಚಿನ ಸಂಬಳವಿಲ್ಲದೆ, ಯಂತ್ರಗಳ ಸಹಾಯವಿಲ್ಲದೆ ಆ ಕಾರ್ಯಗಳನ್ನು ಮಾಡುತ್ತಿರುವಾಗ, ಹೆಚ್ಚಿನ ಸಂಬಳ, ಯಂತ್ರಗಳ ಸಹಾಯ ಇದ್ದಾಗ ಜನರು ದೊರೆಯುವದಿಲ್ಲೆಂಬ ಮಾತಿನಲ್ಲಿ ಏನೂ ಅರ್ಥವಿಲ್ಲ.

ಹೀಗೆ ಸಾಮ್ಯವಾದವು ಕತ್ತೆ ಮನುಷ್ಯರನ್ನು ಒಂದೇ ಎಂದು ತಿಳಿಯದೆ, ಮಾನವ ಜನಾಂಗದಲ್ಲಿರುವ ವಿವಿಧ ಶಕ್ತಿಗಳನ್ನು ಪ್ರೇರೇಪಿಸಿ ಆಯಾ ವಸ್ತುಗಳ ಉಪಯೋಗವು ರಾಷ್ಟ್ರಕ್ಕೆ ಆಗುವಂತೆ ಮಾಡುವದು. ಮಾನವನ ಎಲ್ಲ ಕರ್ತೃತ್ವಶಕ್ತಿಗಳಿಗೆ ಕಾರ್ಯಕ್ಷೇತ್ರವನ್ನು ನಿರ್ಮಿಸುವದು. ಅವರವರ ಒಲವುಗಳಿಗೆ ಉತ್ತೇಜನ ಕೊಟ್ಟು ಮಾನವ ಸಂಸ್ಕೃತಿಯನ್ನು ಬೆಳೆಯಿಸುವದು. ಮಾನವನ ಸರ್ವಾಂಗೀಣ ಉನ್ನತಿಗೆ ಸಾಮ್ಯವಾದ-ವೊಂದೇ ಉಪಾಯವೆಂದು ಹೇಳಬಹುದು.

ಇನ್ನೆರಡು ಪ್ರಶ್ನೆಗಳಿಗೆ ಉತ್ತರ ಕೊಟ್ಟು ಬೆಳೆಯುತ್ತ ನಡೆದ ಈ ಪ್ರಕರಣವನ್ನು ಮುಗಿಸುತ್ತೇವೆ.

ಬಂಡವಲದಾರರು ನಾವು ಶ್ರಮಜೀವಿಗಳಲ್ಲವೆ? ಎಂಬುದೇ ಅವರ ಪ್ರಶ್ನೆ! ಎಷ್ಟು ಜನ ಜಮೀನದಾರರು ತಮ್ಮ ಹೊಲಗಳನ್ನು ನೋಡಿರುವರು? ಹೊಲವೆಂದರೇನು ಎಂಬುದೇನಾದರೂ ಅವರಿಗೆ ಗೊತ್ತಿದೆಯೆ? ಆ ಹೊಲದಿಂದ ಹೆಚ್ಚು ಹಣವನ್ನು ಹೇಗೆ ಸೆಳೆಯಬೇಕೆಂಬುದೇ ಅವರ ದೃಷ್ಟಿಯಿಲ್ಲವೆ? ಒಂದು ವೇಳೆ ಅವರ ಶ್ರಮವನ್ನು ಒಪ್ಪೋಣ. ಅವರ

ಶ್ರಮದ ಹೊರ್ತು ಉಳಿದ ಲಾಭದ ಮೇಲೆ ಅವರಿಗೇನು ಅಧಿಕಾರವಿದೆ? ಈ ಎಲ್ಲ ಪ್ರಶ್ನೆಗಳಿಗೆ ಬಂಡವಲದಾರರ ಉತ್ತರವೇನು? ಕೋಟ್ಯಾವಧಿ ಜನರು ಅವರಿಂದ ಅನನ್ಯಾನ್ಯಗತಿಕರಾಗಿ ತಿರುಗುವರೆಂದ ಬಳಿಕ ಅವರೆಲ್ಲರೂ ಜಮೀನುದಾರರಂತೆ, ಸುಖಿಗಳಾದರೆ ತಪ್ಪೇನು? ಅನ್ಯಾಯವೇನು?

ಇನ್ನು ರಾಜರ ಮಹಾರಾಜರ ಸಮಾಚಾರ! ಜಗತ್ತಿನಲ್ಲಿಯ ಸಂಸ್ಕೃತಿ, ಕಲೆ, ವಿಜ್ಞಾನಗಳ ರಕ್ಷಣೆ ಪೋಷಣೆಗಳು ರಾಜರ, ಮಹಾ ರಾಜರ, ಬಂಡವಲದಾರರಿಂದಲೇ ಆಗಿಲ್ಲವೆ? ಅಂದಮೇಲೆ ಅವರನ್ನು ನಾಶಪಡಿಸುವದು ಎಂಥ ನ್ಯಾಯ ಎಂಬುದೇ ಪ್ರಶ್ನೆ.

ರಾಜರು, ಮಹಾರಾಜರು, ಬಂಡವಲದಾರರು ಇವರಿಂದ ಯಾವ ಕಲ್ಯಾಣವಾಗಿದೆ ಎಂಬುದನ್ನೇ ಇಲ್ಲಿಯ ವರೆಗೆ ವಿವರಿಸುತ್ತ ಬಂದಿದ್ದೇವೆ. ಸಂಸ್ಕೃತಿಯ ಸಂರಕ್ಷಣವೆಂಬ ಢಾಲಿನ ಮರೆಯಲ್ಲಿ ಬದುಕಲು ಬಯಸು ತ್ತಾರೆ. ಇದು ಎಷ್ಟರ ಮಟ್ಟಿಗೆ ನಿಜವಿದೆ? ಕೇವಲ ಕಲೆಯ ಉದ್ಧಾರಕ್ಕೆ ಎಂದು ಎಷ್ಟು ಜನರು ನೆರವಾಗಿದ್ದಾರೆ? ಅದಕ್ಕೂ ಒಂದು ಉದ್ದೇಶ ವುಂಟು. ತಾವು ದೊಡ್ಡವರು, ತಮ್ಮ ಕೀರ್ತಿಯು ಎಲ್ಲ ಕಡೆಗೆ ಹಬ್ಬ ಬೇಕು, ಅದರಿಂದ ಸುಲಿಗೆಗೆ ಅನುಕೂಲವಾಗಬೇಕು. ಇವೇ ಮೊದಲಾದ ಅನೇಕ ಉದ್ದೇಶಗಳು ಅದರಲ್ಲಿ ಇವೆ. ಎಷ್ಟೋ ರಾಜರು ಮಹಾರಾಜರು ಕಲೆ, ಸಂಸ್ಕೃತಿಗಳ ದ್ವೇಷಿಗಳೇ ಇದ್ದರೆಂದು ಇತಿಹಾಸವೇ ಸಾರುತ್ತದೆ. ಈ ರಾಜರು ಮಹಾರಾಜರಿಂದ ಕಲೆಗೆ ಉತ್ತೇಜನ ದೊರೆತಷ್ಟು ಹಾನಿಯೂ ಆಗಿದೆ. ಕಲಾನಿಪುಣರು ಇವರ ಗುಲಾಮರು ತಮ್ಮ ಮನಬಂದತೆ ಕಲೆಯನ್ನು ಬೆಳಿಸಲು ಅವರಿಗೆ ಅನುವಿಲ್ಲ. ಇವರ ಇಚ್ಛೆಯಂತೆ ಅವರು ಬೆಳಿಸಬೇಕು. ಆದರೆ ಸಾಮ್ಯವಾದವು ಎಲ್ಲರಿಗೂ ಸ್ವಾತಂತ್ರ್ಯವನ್ನು ಕೊಟ್ಟು ಅವರನ್ನು ಮುಕ್ತಮಾಡಿದೆ. ಬೆಳಿಸಲು ಅನುಕೂಲತೆ ಒದಗಿಸಿ ಕೊಡುತ್ತದೆ. ಅಂದಮೇಲೆ ಇವರ ಆವಶ್ಯಕತೆಯೇನು?

ಆಕ್ಷೇಪಕರ ಎಲ್ಲ ಮಾತುಗಳಿಗೂ ಸಾಧಾರಣವಾಗಿ ಉತ್ತರ ಕೊಟ್ಟಂತಾಯಿತು. ಸಾಮ್ಯವಾದವು ಸಮಾಜಕ್ಕೆ ಹಿತಮಾಡುತ್ತಿ ದ್ದರೂ ಇಂಥ ಕ್ರಾಂತಿಕಾರಕ ಬದಲಾವಣೆಗಳನ್ನು ಇಂದು ಸ್ವೀಕರಿಸ

ಬೇಕೆ? ಇದಕ್ಕಿಂತಲೂ ಸುಖಕಕರವಾದ ಮಾರ್ಗವು ಇನ್ನೊಂದಿಲ್ಲವೊ? ಶಾಂತಿದೂತರಾದ ಮಹಾತ್ಮರ **ಗಾಂಧೀವಾದವು** ಸುಖ-ಸಮಾಧಾನಗಳನ್ನು ಒದಗಿಸಿಕೊಡಲಾರದೆ? ಎಂಬುದೆ ಇಂದು ಜಗತ್ತಿನ ಎದುರಿಗಿರುವ ಪ್ರಶ್ನೆ. ಈ ಪ್ರಶ್ನೆಯನ್ನು ಬಿಡಿಸುವದೇ ಮುಂದಿನ ಪ್ರಕರಣದ ಉದ್ದೇಶ.

---

# ಗಾಂಧೀವಾದವೂ ಸಾಮ್ಯವಾದವೂ



೧೧

ಮಹಾತ್ಮರು ಭಾರತದ (ಕಾಂಗ್ರೆಸ್ಸಿನ) ರಾಜ್ಯಸೂತ್ರಗಳನ್ನು ಕೈಯಲ್ಲಿ ತೆಗೆದುಕೊಂಡಂದಿನಿಂದ ಅವರ ವ್ಯಕ್ತಿತ್ವದ ಪ್ರಭಾವವೂ ಅವರ ತತ್ವಗಳ ಪ್ರಭಾವವೂ ಭಾರತದ ಜನಾಂಗದ ಮೇಲೆ ಆಗುವದು ಸ್ವಾಭಾವಿಕವಿದೆ. ಮಹಾತ್ಮರು ರಾಜಕೀಯ ಸಂಗ್ರಾಮದೊಡನೆಯೇ ಸಾಮಾಜಿಕ ಹೋರಾಟವನ್ನೂ ಹೂಡಿದ್ದಾರೆ. ಭಾರತದ ಈ ಜಾಗ್ರತೆಯು ನವನವ ವಿಚಾರಗಳನ್ನು ಸ್ವಾಗತಿಸುತ್ತಲಿದೆ. ಇಂದು ಭಾರತೀಯರ ಮನೋಭೂಮಿಯಲ್ಲಿ ಅನೇಕ ಬೀಜಗಳು ಬಿತ್ತಲ್ಪಟ್ಟಿವೆ. ಸಂಗ್ರಾಮದ ಕೇಂದ್ರ ಸಂಸ್ಥೆಯಾದ ಕಾಂಗ್ರೆಸ್ಸಿನಲ್ಲಿ ಸಾಮ್ಯವಾದದ ತತ್ವಗಳು ಮುನ್ನಡೆ ಪಡೆಯುತ್ತ ನಡೆದಿವೆ ಎಂಬ ಬಗ್ಗೆ ನಾವು ಹಿಂದೆಯೇ ೧೯೩೪ನೆಯ ಇಸ್ವಿ ಅ. ಭಾ. ಕಾಂಗ್ರೆಸ ಕಮೀಟಿಯ ಗೊತ್ತುವಳಿಯನ್ನು ಉದಹರಿಸಿದ್ದೇವೆ. ಸಾಮ್ಯವಾದವು ತಲೆಯೆತ್ತಿದೊಡನೆಯೇ ಅದರ ಆಘಾತ ಪ್ರತ್ಯಾಘಾತ ಗಳು ಆಗುವದು ಸ್ವಾಭಾವಿಕ.

ಮಹಾತ್ಮರು ತಮ್ಮ ಸ್ವರಾಜ್ಯದ ಯೋಜನೆಯಲ್ಲಿ ಸಮಾಜದ ಘಟನೆ ಹೇಗಿರಬೇಕೆಂಬ ಬಗ್ಗೆ ಪೂರ್ಣವಾಗಿ ವಿಚಾರ ಪ್ರಕಟಿಸಿಲ್ಲ. ಸಾಮ್ಯವಾದದ ಘೋಷಣೆಯು ಅವರ ಶಾಂತತೆಯನ್ನೂ ಭಂಗಪಡಿಸಿದೆ ಎಂದು ಹೇಳಬಹುದು. ಅವರು ಆಗಾಗ್ಗೆ ಇದರ ವಿಷಯವಾಗಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಲಿದ್ದಾರೆ. ಆದರೆ ಎಲ್ಲಿಯೂ ಅವರು ತಮ್ಮ ವಾದವನ್ನು ಸೂತ್ರಬದ್ಧವಾಗಿ ಹೇಳಿಲ್ಲ. ಅವರ ವಿಚಾರ ಗಳು ಸಾಮ್ಯವಾದಿಗಳಿಗೆ ಹೊಸವೆನಿಸದೆ, ಯಂತ್ರಯುಗದ ಪ್ರಭಾತ

ಕಾಲದಲ್ಲಿ ಅಲ್ಲಿಯ ಪಾದ್ರಿಗಳೂ, ತತ್ವವೇತ್ತರೂ ಹೇಳಿದ ಮಾತುಗಳೆಂದೇ ಎನಿಸುತ್ತವೆ. ಇರಲಿ. ಅವರ ಲೇಖನಗಳಿಂದ ಅವರ ಆರ್ಥಿಕ ವಿಚಾರಗಳನ್ನು ಆಯ್ದುಕೊಳ್ಳಬಹುದು. ಅವರ ಈ ವಿಚಾರಗಳು ಸಾಮ್ಯವಾದದ ಸ್ಥಾನವನ್ನು ನಿಜವಾಗಿಯೂ ತುಂಬಬಲ್ಲವೆಂದು ಕೆಲವರಿಗೆ ಅನಿಸುತ್ತದೆ. ಆದುದರಿಂದ ಅವುಗಳನ್ನು ವಿಮರ್ಶಿಸುವದು ಅವಶ್ಯವಿದೆ.

ಮಹಾತ್ಮರ ಮೂಲಭೂತವಾದ ಜೀವನದ ತತ್ವಗಳು ಅವರ **ಮಂಗಲಪ್ರಭಾತದಲ್ಲಿ** ವಿಸ್ತರಿಸಲ್ಪಟ್ಟಿವೆ. ಅವುಗಳಲ್ಲಿಯ ಅಪರಿಗ್ರಹ ಅಸ್ತೇಯ ಪ್ರಕರ್ಣಗಳಲ್ಲಿ ಆರ್ಥಿಕ ವ್ಯವಸ್ಥೆಯ ಬೀಜಮಾತುಗಳು ಇವೆ. ಸಂಗ್ರಹ ಬುದ್ಧಿಯೇ ಪಾಪವೆಂದು ತಿಳಿಯುವಷ್ಟು ಸೂಕ್ಷ್ಮದೃಷ್ಟಿಯಿಂದ ವಿಚಾರಮಾಡಿದ್ದಾರೆ. ಆದರೆ ಈ ತತ್ವದ ಮೇಲೆ, ಸಮಾಜದ ರಚನೆಯನ್ನು ಹೇಗೆ ಮಾಡಬೇಕೆಂಬ ಬಗ್ಗೆ ಮಾತ್ರ ವಿಸ್ತಾರವಾಗಿ ಎಲ್ಲಿಯೂ ಹೇಳಿಲ್ಲ.

ಸಂಯುಕ್ತ ಪ್ರಾಂತದ ಕೆಲವು ಜಮೀನದಾರರು ಕೇಳಿದ ಕೆಲವು ಪ್ರಶ್ನೆಗಳಿಗೆ ಉತ್ತರ ಕೊಡುವಾಗ ಕೆಲವು ಮಾತುಗಳ ಸ್ಪಷ್ಟೀಕರಣ ಮಾಡಿದ್ದಾರೆ. ಅವು ಕೆಳಗಿನಂತಿವೆ.

**ಪ್ರಶ್ನೆ**—ಕರಾಚಿಯ ಕಾಂಗ್ರೆಸ್ಸಿನಲ್ಲಿ ಜನತೆಯ ಮೂಲಭೂತವಾದ ಹಕ್ಕುಗಳನ್ನು ಸಾರುವಾಗ ಅದು ಸ್ವಂತ ಆಸ್ತಿಯನ್ನು ಒಪ್ಪುವದರಿಂದ ರಾಷ್ಟ್ರೀಯ ವೃತ್ತಿಯ ಜಮೀನದಾರರೆಲ್ಲ ಕಾಂಗ್ರೆಸ್ಸಿಗೆ ಬೆಂಬಲರಾಗಿರುವರು. ಆದರೆ ವ್ಯಕ್ತಿಒಡೆತನವು ಇರಬಾರದೆಂದು ಬೆದರಿಸುವ ಸಾಮ್ಯವಾದಿಗಳ ಗುಂಪೊಂದು ಕಾಂಗ್ರೆಸ್ಸಿನಲ್ಲಿ ತಲೆಯೆತ್ತುತ್ತಲಿದೆ. ಆದ್ದರಿಂದ ಇನ್ನು ಮುಂದಿನ ಕಾಂಗ್ರೆಸ ಧೋರಣವು ಯಾವುದು? ಸಾಮ್ಯವಾದಿಗಳ ಈ ವಿಚಾರಗಳಿಂದ ವರ್ಗಕಲಹವು ಕೂಡಲೆ ಪ್ರಾರಂಭವಾಗಲಿಕ್ಕಿಲ್ಲವೇ?

**ಉತ್ತರ**—ಕರಾಚಿಯ ನಿರ್ಣಯವು ಮುಂದಿನ ಕಾಂಗ್ರೆಸ್ಸಿನ ಅಧಿವೇಶನದಲ್ಲಿಯೇ ಬದಲಾಗಬಹುದು. ಆದರೆ ನಾನು ಮಾತ್ರ ನಿಮಗೆ ಈ ರೀತಿಯಾಗಿ ಆಶ್ವಾಸನ ಕೊಡಬಲ್ಲೆನು. ನ್ಯಾಯವಾದ ಕಾರಣಗಳಿಲ್ಲದೆ, ಸೊತ್ತುಳ್ಳವರ ಆಸ್ತಿಗಳನ್ನು ಕಸಿದುಕೊಳ್ಳುವದರಲ್ಲಿ ನಾನು ಭಾಗ ವಹಿಸುವದಿಲ್ಲ. ನಿಮ್ಮ ಹೃದಯವನ್ನು ಹೊಕ್ಕು ಅದನ್ನು

ಪರಿವರ್ತನಗೊಳಿಸುವದೇ ನನ್ನ ಉದ್ದೇಶ. ಅಂದರೆ, ನಿಮ್ಮ ಆಸ್ತಿಯು ಕೇವಲ ನಿಮ್ಮ ಸುಖೋಪಭೋಗಕ್ಕಾಗಿ ಇರದೆ, ನಿಮ್ಮ ರೈತರಿಗೆಂದು ಬಗೆದು ಪ್ರಾಮುಖ್ಯವಾಗಿ, ಅವರ ಹಿತಕ್ಕೆಂದು ಇಟ್ಟುಕೊಂಡು, ನೀವು ಬಳಸುವಿರೆಂದು ನನ್ನ ಆಸೆ. ಕಾಂಗ್ರೆಸ್ಸಿನ ಬಳಗದಲ್ಲಿ ಸಾಮ್ಯವಾದವು ಉದಯವಾಗುತ್ತಲಿದೆ ಎಂಬುದನ್ನು ನಾನು ಬಲ್ಲೆನು. ಕಾಂಗ್ರೆಸ್ಸನ್ನು ತನ್ನ ದಾರಿಗೆ ಎಳೆಯುವ ಅವರ ಪ್ರಯತ್ನಕ್ಕೆ ಗೆಲವು ಸಿಕ್ಕರೆ ಮುಂದೆ ಏನಾಗುವದೆಂಬುದನ್ನು ನಾನು ಹೇಳಲಾರೆ. ಆದರೆ ಇಷ್ಟು ಮಾತ್ರ ನಿಜ. ನಮ್ಮ ಕೋಟ್ಯಾನುಕೋಟಿ ಪ್ರಜೆಗಳ ಅಂತಃಕರಣದಲ್ಲಿ ಶ್ರೀಮಂತರ ಆಸ್ತಿಯನ್ನು ಕಿತ್ತುಕೊಳ್ಳಬೇಕೆಂದು ಇರುವದಿಲ್ಲೆಂಬ ಮಾತು ಅವರ ಮತ ತೆಗೆದುಕೊಂಡರೆ ತಿಳಿಯುವದು. ಕೂಲಿಕಾರ ಮತ್ತು ಬಂಡವಲ ದಾರ ರೈತರು ಮತ್ತು ಜಮೀನದಾರರು ಇವರಲ್ಲಿ ಸಹಕಾರ ಪ್ರೇಮ ಗಳನ್ನುಂಟು ಮಾಡುವದಕ್ಕಾಗಿ ನಾನು ದುಡಿಯುತ್ತೇನೆ. ಕಾಂಗ್ರೆಸ್ಸಿನ ಧ್ಯೇಯಧೋರಣಗಳಿಗೊಪ್ಪಿ ನಾಲ್ಕು ಆಣೆಗಳನ್ನು ಕೊಟ್ಟು ತೀರ ಬಡವರು ಅದರ ಸದಸ್ಯರಾಗುವಂತೆ ನೀವೂ ಆಗಬಹುದು. ಆದರೆ ನಾನು ನಿಮಗೆ ಒಂದು ಎಚ್ಚರಿಕೆಯ ಮಾತನ್ನು ಹೇಳಲೇಬೇಕು. ಗಿರಣಿಕಾರರು ತಮ್ಮ ಗಿರಣಿಗಳ ಪೂರ್ಣ ಯಜಮಾನರಲ್ಲವೆಂದೂ, ಕೆಲಸಗಾರರೂ ಅವುಗಳ ಸಮಾನ ಹಕ್ಕುದಾರರೆಂದೂ ನಾನು ಯಾವಾಗಲೂ ಗಿರಣಿ ಕಾರರಿಗೆ ಹೇಳಿದ್ದೇನೆ. ಅದರಂತೆಯೇ ನಿಮ್ಮ ಆಸ್ತಿಯ ಮೇಲೆ, ನಿಮ್ಮಷ್ಟೇ ನಿಮ್ಮ ರೈತರದೂ ಅಧಿಕಾರವಿರುತ್ತದೆಂದು ನಾನು ಹೇಳುವೆನು. ಆದುದರಿಂದ ನಿಮ್ಮ ಕೈಗೆ ಬಂದ ಹುಟ್ಟುವಳಿಯನ್ನೆಲ್ಲ ದುಂದುಗಾರಿಕೆಯಲ್ಲಿಯೂ, ವಿಲಾಸಕ್ಕಾಗಿಯೂ ಉಪಯೋಗಿಸಲಾ ಗದು ಅದನ್ನು ರೈತರ ಕಲ್ಯಾಣಕ್ಕಾಗಿ ಉಪಯೋಗಿಸಬೇಕು. ನಿಮ್ಮಲ್ಲಿ ರೈತರ ಬಗ್ಗೆ ಆತ್ಮೀಯ ಭಾವನೆಯು ಇದೆಯೆಂದು ಅವರ ಅನುಭವಕ್ಕೆ ಬಂದರೆ, ನಿಮ್ಮಿಂದ ತಮ್ಮ ಹಿತಸಂಬಂಧಗಳು ಸುರಕ್ಷಿತವಾಗಿ ರಕ್ಷಿಸಲ್ಪ ಡುತ್ತವೆಂದು ಅವರಿಗೆ ಮನವರಿಕೆಯಾದರೆ, ಇಬ್ಬರಲ್ಲಿಯೂ ಪ್ರೇಮ ಸಂಬಂಧವು ಉಂಟಾಗಿ, ವೈಷಮ್ಯವು ಎಂದೂ ತಲೆದೋರಲಾರದು. ವರ್ಗಕಲಹವು ಭಾರತದ ಸಂಸ್ಕೃತಿಗೆ ತೀರ ಅಯೋಗ್ಯವು. ಎಲ್ಲರ

ಮೂಲಭೂತವಾದ ಹಕ್ಕುಗಳ ವಿಶಾಲವಾದ ತಳಹದಿಯ ಮೇಲೆ, ಸಮಾನ ನ್ಯಾಯದ ಮೇಲೆ, ಇಲ್ಲಿ ಸಂಘವಾದವನ್ನು ವಿಕಾಸಗೊಳಿಸಬಹುದು. ನನ್ನ ಕನಸಿನ ರಾಮರಾಜ್ಯವು ಬಡವರ ಮತ್ತು ಶಿರಿವಂತರ ಹಕ್ಕುಗಳನ್ನು ಏಕರೀತಿಯಲ್ಲಿ ಸಾಧಿಸುವದು.

ವರ್ಗಕಲಹವು ಆಗದಂತೆ, ನಾನು ನನ್ನ ಎಲ್ಲ ಶಕ್ತಿಯನ್ನು ಉಪಯೋಗಿಸುವೆನೆಂಬ ಬಗ್ಗೆ ನಿಮಗೆ ಸಂಶಯ ಬೇಡ. ನನ್ನ ಮೇಲೆ ನಾನೇ ಹಾಕಿಕೊಂಡ ನಿರ್ಬಂಧದ ಅವಧಿಯು ಮುಗಿದ ನಂತರ ಏನು ಮಾಡಲಿರುವೆನೆಂಬುದನ್ನು ನಾನೇ ಅರಿಯೆ. ಮತ್ತೆ ಸೆರೆಮನೆ ಸೇರದಂತೆ ಆದಷ್ಟು ಪ್ರಯತ್ನಿಸುವೆನು. ಆದರೆ ಮುಂದೆ ಹೀಗೆಯೇ ಆಗುವದೆಂದು ನಿಶ್ಚಿತವಾಗಿ ಹೇಳಲು ಬರುವಂತಿಲ್ಲ. ಅನ್ಯಾಯವಾಗಿ ನಿಮ್ಮ ಆಸ್ತಿಯನ್ನು ಕಿತ್ತುಕೊಳ್ಳುವ ಪ್ರಸಂಗ ಬಂದರೆ, ನಿಮಗಾಗಿ ನಾನು ಹೋರಾಡುವೆನೆಂಬುದನ್ನು ನೀವು ನೋಡುವಿರಿ.

**ಪ್ರಶ್ನೆ ೨**—ಪರಿಷ್ಠ ನ್ಯಾಯಸಭೆಯ ಚುನಾವಣಿಯಲ್ಲಿ ನಾವು ಕಾಂಗ್ರೆಸ್ಸಿಗೆ ನೆರವಾಗಬೇಕೆಂದು ನಿರ್ಧರಿಸಿದ್ದೇವೆ. ಆದರೆ ಕಾಂಗ್ರೆಸ ಪ್ರತಿನಿಧಿಗಳು ಅಸೆಂಬ್ಲಿಯಲ್ಲಿ ಸ್ವೀಕರಿಸುವ ಧೋರಣದ ವಿಷಯಕ್ಕೆ ನಮಗೆ ಸಂಶಯವಿದೆ. ನೀವು ಪಾರ್ಲಿಮೆಂಟರಿ ಬೋರ್ಡಿನವರಿಗೆ ಹೇಳಿ ನಮ್ಮ ಸಂಶಯಗಳನ್ನು ದೂರ ಮಾಡುವಿರಾ?

**ಉತ್ತರ**—ಪಾರ್ಲಿಮೆಂಟರಿ ಬೋರ್ಡಿನ ಸದಸ್ಯರೊಡನೆ ಈ ವಿಷಯವನ್ನು ಚರ್ಚಿಸಲು ನಿಮಗೆ ನಾನು ಆಮಂತ್ರಿಸುವೆನು. ವ್ಯಕ್ತಿ ಒಡೆತನವನ್ನು ನಾಶಪಡಿಸುವ ಮಾತನ್ನು ಯಾರೂ ಎತ್ತುವದಿಲ್ಲೆಂಬುದನ್ನು ನಾನು ಬಲ್ಲೆ. ಆದರೆ ರೈತರೊಡನೆ ಇರುವ ನಿಮ್ಮ ಸಂಬಂಧವು ಮಾತ್ರ ಪೂರ್ಣ ಸುಧಾರಿಸಲಿಕ್ಕೇ ಬೇಕೆಂದು ಅವರು ಹಟ ಹಿಡಿಯುವರು. ಈ ಬೇಡಿಕೆಯು ನಿಮಗೂ ಹೊಸತಲ್ಲ. ಕಾಲಮಹಿಮೆಯನ್ನರಿತು ಅದಕ್ಕನುಸರಿಸಿ ಜೀವನವನ್ನು ಮಾರ್ಪಾಟು ಮಾಡಿಕೊಳ್ಳಬೇಕೆಂದು, ಲಾರ್ಡ ಇರ್ವಿನ್ನರು ನಿಮಗೆ ಬಿನ್ನವಿಸಿಕೊಂಡಿರುವರು. ಇಷ್ಟೊಂದು ಕೆಲಸವನ್ನು ನೀವು ನೆರವೇರಿಸಿದರೆ, ಅತ್ಯಂತ ಪರಿಶುದ್ಧವಾದ

**ಸ್ವದೇಶೀ ಪದ್ಧತಿಯ ಸಾಮ್ಯವಾದವನ್ನು** ನಾವು ಖಂಡಿತವಾಗಿಯೂ ರೂಪಗೊಳಿಸಬಲ್ಲೆವು. ಪಶ್ಚಿಮದ ಸಂಘವಾದ ಹಾಗೂ ಸಾಮ್ಯವಾದಗಳು ನಮಗಿಂತಲೂ ಭಿನ್ನವಾದ ಮೂಲತತ್ವಗಳ ಮೇಲೆ ಕಟ್ಟಲ್ಪಟ್ಟಿವೆ. ಮಾನವ ಸ್ವಭಾವವು ಸ್ವಾರ್ಥಮೂಲವಾಗಿದೆ ಎಂಬ ನಂಬುಗೆಯು ಇಂತಹ ಕಲ್ಪನೆಗಳಲ್ಲೊಂದು. ನಾನು ಇದಕ್ಕೆ ಸಮ್ಮತಿಸುವದಿಲ್ಲ. ಮಾನವನು ಆತನಲ್ಲಿರುವ ಆತ್ಮನ ಕರೆಗೆ ಓಗೊಡುವನು. ಪ್ರಾಣಿಗಳಲ್ಲಿ ಸಾಮಾನ್ಯವಾಗಿರುವ ವಾಸನೆಗಳನ್ನು ಮೀರಿ ಆತನು ನಿಲ್ಲಬಲ್ಲನು. ಸ್ವಾರ್ಥ ಹಿಂಸೆಗಳು, ಪಶುಸ್ವಭಾವವೇ ಹೊರತು ಆತ್ಮನ ಗುಣಗಳಲ್ಲ. ಆದುದರಿಂದ ಮಾನವನು ಪಶುಗಳಿಗಿಂತ ಶ್ರೇಷ್ಠನು. ಇದು ಹಿಂದೂ ಧರ್ಮದ ಮೂಲತತ್ವ. ಈ ಸತ್ಯಶೋಧವು ಸಾವಿರಾರು ವರುಷಗಳ ನಿಷ್ಠುರ ತಪಸ್ಸಿನ ಫಲ. ಆದುದರಿಂದಲೇ ನಮ್ಮಲ್ಲಿ ಆತ್ಮರಹಸ್ಯವನ್ನು ಅರಿಯುವದಕ್ಕಾಗಿ, ಅನೇಕ ಋಷಿಮುನಿಗಳು ದೇಹವನ್ನು ದಂಡಿಸಿ, ಪ್ರಾಣಾರ್ಪಣೆಯನ್ನು ಮಾಡಿದ್ದಾರಲ್ಲದೆ, ಪಾಶ್ಚಾತ್ಯರಂತೆ, ದೂರದ ದೇಶಗಳನ್ನು ಕಂಡುಹಿಡಿಯುವದಕ್ಕೆ ಜೀವನವನ್ನು ಕಳೆದುಕೊಂಡಿಲ್ಲ. ಅಂದ ಬಳಿಕ ನಮ್ಮ ಸಂಘವಾಗಲಿ ಸಾಮ್ಯವಾದವಾಗಲಿ, ಅಹಿಂಸೆಯ ಅಸ್ತಿವಾರದ ಮೇಲೆ ನೆಲೆಯಾಗಬೇಕು. ಅದನ್ನು ಕೂಲಿಕಾರ ಬಂಡವಲದಾರ, ಒಕ್ಕಲು ವರ್ಗದಾರ, ಇವರ ಮಧುರ ಸಹಕಾರದಿಂದಲೇ ಬೆಳಿಸಬೇಕು.

ಕಾಂಗ್ರೆಸ್ಸಿನ ಧ್ಯೇಯ ಧೋರಣಗಳಲ್ಲಿ ನಿಮ್ಮನ್ನು ಬೆದರಿಸುವಂತಹದೇನೂ ಇಲ್ಲ. ನಾನು ಹೇಳುವದನ್ನು ದಯವಿಟ್ಟು ಲಾಲಿಸಿರಿ. ನಿಮ್ಮ ಸಂಶಯ ಭೀತಿಗಳೆಲ್ಲವೂ ಪಾಪವುಳ್ಳ ಮನಸ್ಸಿನ ಫಲಗಳು. ತಿಳಿದಾಗಲಿ ತಿಳಿಯದೆಯಾಗಲಿ ಮಾಡಿದ ಅನ್ಯಾಯಗಳಿಗಾಗಿ, ನೀವು ಅಪರಾಧಿಗಳಾಗಿರುವಿರಿ. ಅಂತಹ ಅನ್ಯಾಯಗಳನ್ನೆಲ್ಲ ಉಡುಗಿರಿ. ಕಾಂಗ್ರೆಸ್ಸಿನ ಹಾಗೂ ಕಾಂಗ್ರೆಸ್ಸಿನ ಕೆಲಸಗಾರರ ಹೆದರಿಕೆಯನ್ನು ತೊರೆಯಿರಿ. ರೈತರ ಮತ್ತು ಜಮೀನದಾರರ ಸಂಬಂಧಗಳನ್ನಷ್ಟು, ನೀವು ಸುಧಾರಿಸಿದರೆ ನಿಮ್ಮ ಪರವಾಗಿ ನಿಮ್ಮ ಸ್ವಂತ ಆಸ್ತಿ ಹಕ್ಕುಗಳನ್ನು ಕಾಪಾಡಲು ನಾವು ಹಂಗುದೊರೆದು ಹೋರಾಡುವೆವು. ನಾನು "ನಾವು" ಎಂಬ

ಪದವನ್ನು ಉಚ್ಚರಿಸುವಾಗ ನನ್ನ ಕಣ್ಣೆದುರು ಪಂಡಿತ ಜವಾಹರಲಾಲ ರಿದ್ದಾರೆ. ಈ ಮೂಲಭೂತವಾದ ಅಹಿಂಸೆಯ ವಿಷಯದಲ್ಲಿ ನಮ್ಮಿಬ್ಬ ರಲ್ಲಿಯೂ ಭೇದವಿಲ್ಲೆಂಬುದು ನನಗೆ ಖಂಡಿತ ಗೊತ್ತು. ಪಂಡಿತರು ಆಸ್ತಿಯ ರಾಷ್ಟ್ರೀಕರಣವಾಗಬೇಕೆಂದು ಮಾತಾಡುತ್ತಿರುವದು ನಿಜ. ಆದರೆ ನೀವು ಅದಕ್ಕೆ ಬೆದರಬೇಕಾದ ಕಾರಣವಿಲ್ಲ. ವ್ಯಕ್ತಿಗಳ ವಶದಲ್ಲಿಹದ ಹೊರತು ರಾಷ್ಟ್ರಕ್ಕೆ ಆಸ್ತಿಗಳನ್ನು ಇಟ್ಟುಕೊಳ್ಳುವದು ಶಕ್ಯವಿಲ್ಲ. ಆಸ್ತಿಯ ದುರುಪಯೋಗವನ್ನು ನಿಲ್ಲಿಸಿ, ಅದರ ನ್ಯಾಯವಾದ ಮತ್ತು ಸಮಾನವಾದ ಪ್ರಯೋಜನವಾಗುವಂತೆ, ರಾಷ್ಟ್ರವು ವ್ಯವಸ್ಥೆ ಮಾಡುವದು. ರೈತರ ಹಿತಕ್ಕಾಗಿ, ನಿಮ್ಮ ಆಸ್ತಿಗಳನ್ನಿಟ್ಟು ಬಳಸುವದಕ್ಕೆ ನಿಮಗೆ ಯಾವದಾದರೂ ಆಕ್ಷೇಪಗಳಿರಬಹುದೆಂದು ನನಗೆ ತೋರುವ ದಿಲ್ಲ. ಒಕ್ಕಲಿಗರಿಗೆ ತೊಂದರೆಯಿಲ್ಲದೆ ಸುಖವಾಗಿ ಬಾಳುವದಕ್ಕಿಂತ, ಹೆಚ್ಚಿನ ಹಂಬಲುಗಳಿಲ್ಲ. ಆಸ್ತಿಯು ಅವರ ಹಿತಕ್ಕಾಗಿರುವವರೆಗೆ, ಅದರ ಒಡೆತನವು ನಿಮ್ಮದಾಗಿರಲು ಅವರ ತೊಂದರೆಯಿಲ್ಲ.

**—ದಿ ಲೀಡರ, ಅಗಸ್ಟ ೩, ೧೯೩೪**

ಮೇಲಿನ ಉತ್ತರಗಳ ಮೇಲಿಂದ ಸಾಮ್ಯವಾದವು ಮಹಾತ್ಮರ ಶಾಂತತೆಯನ್ನು ಭಂಗಪಡಿಸಿದೆ ಎಂದು ಸ್ಪಷ್ಟವಾಗುತ್ತದೆ. ಆದುದರಿಂ ದಲೇ ಅವರು ಸಾಮ್ಯವಾದವನ್ನು ಎದುರಿಸಲು ಪ್ರಯತ್ನಿಸಿದ್ದಾರೆ. ಅವರು ಹೇಳುವ ಮಾತುಗಳು ಎಷ್ಟರಮಟ್ಟಿಗೆ ತರ್ಕಶುದ್ಧವಾಗಿವೆ ಎಂಬು ದನ್ನು ವಿಚಾರ ಮಾಡಲೇಬೇಕು. ಸಾಮ್ಯವಾದವು ತಲೆಯೆತ್ತಿ ಬಾಳ ಬೇಕಾಗಿದ್ದರೆ, ಈ ಪ್ರಶ್ನೆಗಳಿಗೆ ಸರಿಯಾದ ರೀತಿಯಲ್ಲಿ ಉತ್ತರ ಕೊಡು ವದು ಅವಶ್ಯವಿದೆ.

**ಅಪರಿಗ್ರಹ—**ಮಹಾತ್ಮರ ತತ್ವಜ್ಞಾನವೆಲ್ಲವೂ ಈ ವ್ರತದಲ್ಲಿದೆ. ಸಮಾಜದ ಅಧಃಪತನವನ್ನು ಅವರು ಕಣ್ಣಾರೆ ಕಾಣುತ್ತಲಿದ್ದಾರೆ. ದರಿ ದ್ರರ ಹೊಟ್ಟೆಯ ಕೂಗು ಅವರನ್ನು ಸೇವೆಗೆ ಹಚ್ಚಿದೆ. ರೋಗದ ಚಿಕಿತ್ಸೆ ಯನ್ನೇನೊ ಮಾಡಿದ್ದಾರೆ. ಆದರೆ ಅನುಪಾನವು ಮಾತ್ರ ಸಮಂಜಸ ವಾಗಿಲ್ಲ.ಅಪರಿಗ್ರಹವ್ರತವನ್ನು ಸ್ವೀಕರಿಸುವ ಪ್ರಸಂಗವೇ ವಕೆ? ಎಂದು

ಸಾಮ್ಯವಾದವು ಕೇಳುತ್ತಿದೆ. ಈ ವ್ರತವನ್ನು ಕೈಕೊಳ್ಳುವ ಪ್ರಸಂಗವೇ ಬರದಂತಾಗಬೇಕಾದರೆ, ಮಹಾತ್ಮರ ಇಚ್ಛೆಯಂತೆ-ನಿಜವಾದ ಹಿಂದುತತ್ತ್ವ-ಜ್ಞಾನದಂತೆ–ಆದರ್ಶ ಜೀವನವಾಗಬೇಕಾದರೆ, ಸಾಮ್ಯವಾದವೆ ಯೋಗ್ಯ ಉಪಾಯವಲ್ಲವೆ? ಯಾಕಂದರೆ, ಸಾಮ್ಯವಾದದಲ್ಲಿ ಸಂಗ್ರಹವೇ ಇಲ್ಲ. ಸರ್ವ ಭೂತ ಹಿತೇ ರತಃ' ಎಂಬ ತತ್ತ್ವವೇ ಸಮಾಜವಾದದ ತಳಹದಿಯು. ಆತ್ಮವತ್ ಸರ್ವಭೂತಾನಿ' ಎಂಬ ತತ್ತ್ವವು, ಕೇವಲ ವೇದಾಂತವೆ? ಅದು ಸಮಾಜದ ಜೀವನದಲ್ಲಿ ಏಕೆ ಇಳಿಯಬಾರದು? ಈ ತತ್ತ್ವದ ಅಭಾವವೇ ಇಂದಿನ ಅಶಾಂತಿಗೆ ಕಾರಣವಲ್ಲವೆ? ಸಂಗ್ರಹವು ಕಳವು ಎಂದು ವೇದಾಂತವು ತಿಳಿಯುತ್ತಿದ್ದರೆ, ಕಳ್ಳರನ್ನು ಇಲ್ಲದಂತೆ ಮಾಡುವದು ಧರ್ಮವೂ ನ್ಯಾಯವೂ ಎಂದಂತಾಗುವದಿಲ್ಲವೆ? ಸಾಮ್ಯವಾದವಾದರೂ ಏನನ್ನು ಕೇಳುತ್ತದೆ? ಇದನ್ನೇ ಅಲ್ಲವೆ? ಅಂದಮೇಲೆ ಪಾಶ್ಚಾತ್ಯರ ತತ್ತ್ವಗಳು ಎಂದು ದೂರುವದೇಕೆ? ಕೆಲವು ತತ್ತ್ವಗಳು ಸ್ಥಳಕಾಲಾತೀತವಲ್ಲವೆ? ಈ ಈ ವಾದವು ಪಶ್ಚಿಮದಿಂದ ಬಂದಿರಬಹುದು. ಆದರೆ ಅದರ ಮೂಲ ತತ್ತ್ವಗಳ ಬುಡಕ್ಕೆ ಸರ್ವವ್ಯಾಪಿಯಾದ ತತ್ತ್ವವು ಇದೆಯೋ ಇಲ್ಲವೋ ಎಂಬುದೇ ಈಗಿನ ಪ್ರಶ್ನೆ. ಈ ಎಲ್ಲ ಮಾತುಗಳನ್ನು ನೋಡಿದರೆ, ಇವು ಕೇವಲ ಪಾಶ್ಚಾತ್ಯರ ತತ್ತ್ವಗಳೆಂದು ತಳ್ಳಲು ಅಧಿಕಾರವಿಲ್ಲೆಂದು ಹಿಂದು ತತ್ತ್ವಜ್ಞಾನಿಯು ಮನಗಾಣದಿರಲಾರನು.

ಇನ್ನು ಅವರ **ರಾಮರಾಜ್ಯದ** ಕಲ್ಪನೆಯನ್ನು ನೋಡೋಣ. ತನ್ನ ಕನಸಿನ ರಾಮರಾಜ್ಯವು ಬಡವರ ಬಲ್ಲಿದರ ಹಕ್ಕುಗಳನ್ನು ಏಕ ರೀತಿಯಲ್ಲಿ ಕಾಪಾಡುವದು. ಎಂದು ಮಹಾತ್ಮರು ಹೇಳುತ್ತಾರೆ. ಈ ಮಾತಿನ ಅರ್ಥವೇ ನಮಗಾಗುವದಿಲ್ಲ. ಅಪರಿಗ್ರಹವ್ರತಕ್ಕೂ ಶ್ರೀಮಂತಿಕೆಗೂ ಹೇಗೆ ತಳಕು ಹಾಕುವರೋ ನಮಗೆ ತಿಳಿಯದು. ಇವರ ರಾಮ ರಾಜ್ಯದಲ್ಲಿಯೂ, ಬಡವರು ಬಡವರಾಗಿಯೇ ಇರಬೇಕೆ? ಅಂದಮೇಲೆ ಅದೆಂಥ ರಾಮರಾಜ್ಯ? ಸ್ವತಂತ್ರನಾದ ಆತ್ಮನು (ಇವರ ಮಾತಿನಂತೆಯೆ) ಶ್ರೀಮಂತರ ಕರುಣೆಯ ಮೇಲೆ ಜೀವಿಸಬೇಕೆ? ಇಬ್ಬರ ಹಕ್ಕುಗಳನ್ನೂ ಕಾಪಾಡುವೆವು ಎಂದಮೇಲೆ ಈಗಿದ್ದ ಶ್ರೀಮಂತ, ಬಡವ, ವರ್ಗಗಳು ಇರಲೇಬೇಕೆಂದಂತಾಯಿತು. ಬಡವರ ಹಕ್ಕುಗಳೇನು? ಯಾವಾಗಲು

ಜೀವನಕ್ಕಾಗಿ ಪರರನ್ನೇ ಅವಲಂಬಿಸಬೇಕೆಂದ ಮೇಲೆ, ಅವುಗಳಿಂದೇನು ಪ್ರಯೋಜನ ಅವರಿಗೆ? ಸ್ವತಂತ್ರ ಆತ್ಮನ (ಪರಮಾತ್ಮನ) ರಾಜ್ಯದಲ್ಲಿ ದರಿದ್ರರೆಂಬುವವರು ಏಕೆ ಇರಬೇಕೆಂಬುದೇ ಸಾಮ್ಯವಾದದ ಪ್ರಶ್ನೆ. ಈ ಪ್ರಶ್ನೆಗೆ ಮಹಾತ್ಮರ ಮೌನವೇಕೆ? ಇದರ ಬಗ್ಗೆ ವಿವೇಚನೆಯನ್ನೆ ಮಾಡಿಲ್ಲ. ಗಾಂಧೀವಾದ ಮತ್ತು ಸಾಮ್ಯವಾದಗಳಲ್ಲಿರುವ ಮುಖ್ಯ ಭೇದವೇ ಇದು. ಶ್ರೀಮಂತರಿಗೆ ಬಡವರ ಮೇಲೆ ದಯದೋರುವಂತೆ ಧರ್ಮೋಪದೇಶ ಮಾಡುವದಕ್ಕಿಂತ, ಬಡವರು ಶ್ರೀಮಂತರು ಎಂಬ ಭೇದದ ಮೂಲ ಕಾರಣವನ್ನೇ ಶೋಧಿಸಿ, ಅದನ್ನು ಇಲ್ಲದಂತೆ ಮಾಡು ವದೇ ಯೋಗ್ಯವಲ್ಲವೆ? ಸಾಮ್ಯವಾದವು ಇದನ್ನೇ ಮಾಡುತ್ತಲಿದೆ. ಬಂಡವಲದಾರರು, ಕೂಲಿಕಾರರು, ಜಮೀನದಾರರು, ಒಕ್ಕಲಿಗರು ಹೇಗೆ ಉಂಟಾದರು ಎಂಬುದನ್ನು ಹುಡುಕಿ, ಅದರ ಕಾರಣದ ನಿವಾರಣೆಗೆ ಕೈ-ಹಾಕುವದು ಸಾಮ್ಯವಾದ. ಅಶಾಂತಿಯ ಕಾರಣವನ್ನು ಕಿತ್ತೊಗೆದು ಎಲ್ಲರನ್ನೂ ಬಂಧಮುಕ್ತ ಮಾಡಿ, ಎಲ್ಲರನ್ನೂ ಸಮಾನ ರೀತಿಯಿಂದ ನಡೆಯಿಸುವದು ರಾಮರಾಜ್ಯವೋ, ಬಡವರನ್ನೂ ಶ್ರೀಮಂತರನ್ನೂ ಇಟ್ಟು ಅವರನ್ನು ತಾತ್ಕಾಲಿಕ ಸಮಾಧಾನಪಡಿಸುವದು ರಾಮ ರಾಜ್ಯವೋ?

ಮಹಾತ್ಮರು ಈ ವರ್ಗಭೇದವನ್ನು ಈಗ ಇದ್ದಕ್ಕಿದ್ದಂತೆ ಅಂಗೀ ಕರಿಸುವರು. ಉಚ್ಚ ವರ್ಗದವರು ನೀಚವರ್ಗದವರನ್ನು ಒಳ್ಳೇ ರೀತಿ ಯಿಂದ ನಡೆಯಿಸಿಕೊಂಡರೆ ತೀರಿತು. ಹೀಗೆ ಮಾಡಿಸುವದೇ ಇವರ ಕರ್ತವ್ಯ. ಜಗತ್ತಿನಲ್ಲಿರುವ ಬಹುಸಂಖ್ಯಾಕ ವರ್ಗವು ಜಗತ್ತಿನಲ್ಲಿಯ ಸಂಪತ್ತನ್ನು ನಿರ್ಮಾಣ ಮಾಡಿ, ಮತ್ತೆ ಹೊಟ್ಟೆಗಾಗಿ ಸಿರಿವಂತರ ದಯೆ ವನ್ನು ಅವಲಂಬಿಸಬೇಕೆ? ಇದೆಲ್ಲಿಯ ನ್ಯಾಯ! ನಾವು ದುಡಿದದ್ದಕ್ಕೆ ನಾವು ಒಡೆಯರಲ್ಲವೆ?

ಮಹಾತ್ಮರ ಈ ತತ್ವಜ್ಞಾನವೇ ತಿಳಿಯದಾಗಿದೆ. ಇದರಲ್ಲಿ ಆತ್ಮ ವಂಚನೆಯ ಸಂಶಯವು ಬರುತ್ತದೆ. ಇಂದಿನ ಶ್ರೀಮಂತ ವರ್ಗದ ಧನ ವೆಲ್ಲವೂ ಕೂಲಿಕಾರರ ಒಕ್ಕಲಿಗರ ಶ್ರಮದಿಂದಲೇ ಉಂಟಾದದ್ದು.

**ಪ್ರೌಡ್‌ಹಾನ್** ಇವರ ಅಭಿಪ್ರಾಯದಂತೆ ಇದೆಲ್ಲವೂ ಶುದ್ಧ ಕಳ್ಳತನ. ಈ ಕಳ್ಳತನವನ್ನು ಹಾಗೆಯೇ ನಡೆಯಗೊಡುವದು, ಕಣ್ಣುಮುಚ್ಚಿಕೊಂಡು ನೋಡುವದು, ಸಹಸ ಮಾಡುವದು ಆತ್ಮವಂಚನೆಯಲ್ಲದೆ ಮತ್ತೇನು?

ಈ ವರ್ಗವು ಬಡವರ ಶ್ರಮದ ಫಲವನ್ನು ಅಪಹರಿಸುವದು ಹಿಂಸೆ ಯಲ್ಲವೆ? ಈ ಧನವನ್ನು ಇವರು ಕಾಪಾಡಿಕೊಂಡಿರುವುದು ಹಿಂಸೆಯ ಬಲದಿಂದಲೆ ಅಲ್ಲವೆ? ಇವರ ಹಿಂದಿರುವ ಸರಕಾರದ ಬಲವು ತಪ್ಪಲಿ? ನೋಡೋಣ. ರೈತರೂ ಕೂಲಿಕಾರರೂ ಕೂಡಲೆ ಇವರ ಹೊಲಗಳನ್ನೂ ಕಾರಖಾನೆಗಳನ್ನೂ ವಶಪಡಿಸಿಕೊಳ್ಳುವರು ಎಂದು ಪಂಡಿತ ಜವಾಹರ ಲಾಲರು ಸಹ ಅಭಿಪ್ರಾಯಪಟ್ಟಿದ್ದಾರೆ.

ಅಂದಮೇಲೆ ಮಹಾತ್ಮರ ರಾಜ್ಯದಲ್ಲಿ ಈ ವರ್ಗಭೇದವು, ಅವರ ಸ್ಥಾನಮಾನಗಳು, ಭದ್ರವಾಗಿರಬೇಕೆಂದಮೇಲೆ, ಮಹಾತ್ಮರು ಬಡವರ ಈ ಸುಲಿಗೆಗೆ, ಕಳ್ಳತನಕ್ಕೆ, ಹಿಂಸೆಗೆ ಅನುಮತಿ ಕೊಟ್ಟಂತಾಗಲಿಲ್ಲವೆ? ಯಾಕಂದರೆ ಈ ವರ್ಗಕ್ಕೆ ಉತ್ತರಕೊಡುವಾಗ ನಿಮ್ಮ ಭೂಮಿ ಕಾಣಿಕೆ ಗಳನ್ನು ಕಸಿದುಕೊಳ್ಳುವ ಪ್ರಯತ್ನವು ಆದರೆ, ಅದಕ್ಕೆ ಪ್ರತಿಕಾರವನ್ನು ಮಾಡುವೆನೆಂದು ಅವರಿಗೆ ಅಭಯವನ್ನು ಕೊಟ್ಟಿದ್ದಾರೆ. ಇದರ ಅರ್ಥವೇನು?

ಒಮ್ಮೆ ಉಚ್ಚವರ್ಗದವರು ತಮ್ಮ ಆಸ್ತಿಗಳನ್ನು ಆಳು-ವಕ್ಕಲುಗಳ ವೆಂದು ತಮ್ಮ ವಶದಲ್ಲಿಟ್ಟುಕೊಳ್ಳಬೇಕೆನ್ನುತ್ತಾರೆ. ಇನ್ನೊಮ್ಮೆ ಆಳು ವಕ್ಕಲುಗಳಿಗೆ ಆಸ್ತಿಯಲ್ಲಿ ಸರಿಪಾಲು ಎಂದೆನ್ನುವರು. ಮತ್ತೊಮ್ಮೆ ಎಲ್ಲರನ್ನೂ ಬಳಗದವರಂತೆ ನಡೆಯಿಸಿಕೊಳ್ಳಬೇಕೆನ್ನುವರು. ಇದೇ ಅವರ ವರ್ಗವರ್ಗಗಳಲ್ಲಿಯ ಮಧುರ ಸಹಕಾರದ ಮಾದರಿ.

ಈ ಎಲ್ಲ ಮಾತುಗಳಲ್ಲಿಯೂ ಅನಿಶ್ಚಿತತೆಯೂ, ವಿಸಂಗತಿಯೂ ಕಂಡುಬರುತ್ತದೆ.

ಶ್ರೀಮಂತನು ಒಬ್ಬ ಟ್ರಸ್ಟಿ ಎಂದರೆ, ತನ್ನ ಸಂಪತ್ತಿನ ಎಷ್ಟು ಭಾಗವನ್ನು ಈತನು ಧರ್ಮನಿಧಿ ಎಂದು ತಿಳಿಯಬೇಕು? ಸಕಲ ಸಂಪತ್ತನ್ನೋ ಕೆಲ ವೊಂದು ಅಂಶವನ್ನೋ? ಅಂಶವಾದರೆ ಅದು ಎಷ್ಟು? ಅದನ್ನು ಗೊತ್ತು

ಪಡಿಸುವವರು ಯಾರು? ಸರಿಪಾಲುಗಾರರು ಎಂದರೆ ಅರ್ಥವೇನು? ಅರ್ಧ ಆಸ್ತಿ ಒಕ್ಕಲಿಗರದು, ಅರ್ಧ ಒಡೆಯನದು ಎಂದು ಅರ್ಥವೆ? ಅಥವಾ ಒಡೆಯ ಹಾಗು ಒಕ್ಕಲಿಗರು ಎಲ್ಲರೂ ಸೇರಿ ಒಬ್ಬೊಬ್ಬರಿಗೂ ಸರಿಪಾಲು ಎಂದೊ? ಪಾಲುಗಾರನು ಪಂಚನು ಹೇಗಾಗಬಲ್ಲನು? ಒಳಗ ಡವರು ಎಂಬುದರ ಅರ್ಥವೇನು? ಶ್ರೀಮಂತರ, ರಾಜರ, ಮಹಾರಾಜರ ಅರಮನೆಗಳನ್ನು ಎಲ್ಲರೂ ಬಳಸಬಹುದೆಂದೊ? ಅವರ ಮೋಟಾರ ಕಾರು ಮೊದಲಾದವುಗಳನ್ನು ಎಲ್ಲರೂ ಉಪಯೋಗಿಸಬಹುದೆಂದೊ? ಮಧುರ ಸಹಕಾರವೆಂತಹುದು? ಈ ಪ್ರಶ್ನೆಮಾಲಿಕೆಯು ಇಷ್ಟಕ್ಕೇ ನಿಲ್ಲುವದಿಲ್ಲ.

ಮಹಾತ್ಮರು ಹೇಳುವ ಮಾತುಗಳಿಗೆ ಆಧಾರವೇನು? ಕೂಲಿಯುವ ರಾಗಲಿ, ಒಕ್ಕಲಿಗರಾಗಲಿ ಪಾಲುಗಾರರೇಕಾಗಬೇಕು? ಹುಟ್ಟುವಳಿಯಲ್ಲಿ ಪಾಲಾಗುವ ಹಕ್ಕಿದ್ದಮೇಲೆ, ತಮ್ಮ ಪಾಲಿನದನ್ನು ತಾವೇಕೆ ಇಟ್ಟು ಕೊಳ್ಳಬಾರದು? ತಮ್ಮದನ್ನು ಪರರ ಕೈಗೆ ಕೊಟ್ಟು, ಅವರ ದಯೆಯ ಮೇಲೆ ಜೀವಿಸುವದು ಯಾವ ನ್ಯಾಯ!

ಧನಿಕರ ಸಂಪತ್ತು ಅವರದಲ್ಲವಾದರೆ, ಅದನ್ನು ಅವರ ಕೈಯಲ್ಲಿ ಏಕೆ ಇರಿಸಬೇಕು? ಅವರಿಗೆ ದಾನಮಾಡಲು ಮಾರಿಸಲು ಯಾರಿಗೆ ಅಧಿಕಾರವಿದೆ? ಆದರೆ ಅವರೇ ಬೆವರು ಸುರಿಸಿ ಗಳಿಸಿದ್ದಾದರೆ ಅದನ್ನು ಬೇರೆಯವರಿಗೆ ಕೊಡಿರೆಂದು ಕೇಳಲು ಯಾರಿಗೂ ಅಧಿಕಾರವಿಲ್ಲ.

ಸರಿಯಾದ ಎರಡೇ ಮಾರ್ಗಗಳಿವೆ. ಹಣವೆಲ್ಲವೂ ಹಣವಂತರು ಅನ್ಯಾಯವಾಗಿ ಬಡವರ ಸುಲಿಗೆಯಿಂದ ಸಂಗ್ರಹಿಸಿರುವರೆಂದು ಹೇಳಿ ಅದನ್ನೆಲ್ಲ ಕಿತ್ತುಕೊಳ್ಳಬೇಕು. ಇಲ್ಲವೆ ಅದು ಶ್ರೀಮಂತರದು, ಅವರೇ ಅದರ ಒಡೆಯರೆಂದು ಒಪ್ಪಿಕೊಳ್ಳಬೇಕು. ಇವೆರಡನ್ನೂ ಬಿಟ್ಟು ಹಾವೇರಿ ನ್ಯಾಯವನ್ನು ಮಾಡುವದು ಸರಿಯಲ್ಲ. ವರ್ಗಭೇದಗಳ ಪರಿಣಾಮಗಳ ತೀಕ್ಷ್ಣತೆಯನ್ನು ಕಂಡು ಅದನ್ನು ಶಾಂತಪಡಿಸಲು ಅವುಗಳ ಮೊನೆ ಮುರಿದರೆ ಆಗಲಿಲ್ಲ. ಅದು ತಾತ್ಕಾಲಿಕ ಉಪಾಯವು. ಈ ಉಪಾ ಯವು ರೋಗವನ್ನು ಪೂರ್ಣ ಗುಣಮಾಡಲಾರದು.

ಸಾಮ್ಯವಾದವು ಈ ರೋಗಗಳ ಮೂಲ ಬೇರುಗಳನ್ನೇ ಕತ್ತರಿಸಲು ಪ್ರಯತ್ನಿಸುತ್ತಿದೆ. ಕಾರ್ಲಮಾರ್ಕ್ಸನು ಈ ಬಂಡವಲದ ಮೂಲವನ್ನು ಕಂಡುಹಿಡಿದು ಅದಕ್ಕೆ ಕೊಡಲಿಯನ್ನು ಇಕ್ಕಿ ಸಮಾಜದಲ್ಲಿ ಸ್ಥಿರವಾದ ಶಾಂತಿಯನ್ನುಂಟುಮಾಡುವ ಶಾಂತಿದೂತನಾಗಿದ್ದಾನೆ. ಇವರ ಶಾಸ್ತ್ರೀಯವಾದ ಈ ಸಿದ್ಧಾಂತವನ್ನು ಸ್ವೀಕರಿಸದಿದ್ದರೆ, ಸಂಪತ್ತನ್ನು ಬೇರೆಯವರಿಗೆ ಕೊಡಿರೆಂದು ಹೇಳಲು ಯಾರಿಗೂ ಅಧಿಕಾರವಿಲ್ಲ. ಆತನು ಬೇಕಾದರೆ ಕೊಡಬಹುದು.

ಇನ್ನೂ ಅವರು ಹೇಳುವದೇನಂದರೆ, 'ಸಂಪತ್ತಿಗೆಲ್ಲ ತಾವು (Trustee) ಪಂಚರೆಂದು ತಿಳಿದು ರೈತರಿಗಾಗಿ ಉಪಯೋಗಿಸುವಂತೆ ಅವರನ್ನು ಪ್ರೇರಿಸುವದು.' ಇದರ ಬಗ್ಗೆ ಗಾಂಧಿಯವರು ಏನು ಮಾಡುವರು? ಅವರ ಅಂತಃಕರಣಕ್ಕೆ ಬಿನ್ನವಿಸುವದರ ಹೊರತು ಗಾಂಧಿಯವರ ಹತ್ತರ ಏನಿದೆ? ಈಗ ಸಾವಿರಾರು ವರುಷಗಳಿಂದ ಮಹಾತ್ಮರು, ತಪಸ್ವಿಗಳು, ಧರ್ಮವೀರರು ಇದೇ ಮಾತನ್ನು ಉಪದೇಶಿಸಿಲ್ಲವೆ? ಇದರಲ್ಲಿ ಯಾರಿಗೆ ಜಯ ದೊರೆತಿದೆ? ಸ್ವತಃ ಮಹಾತ್ಮರಿಗೆ ದೊರೆತಿದೆಯೆ ಎಂಬುದೆ ನಮ್ಮ ಪ್ರಶ್ನೆ. ಮಹಾತ್ಮರ ಸ್ನೇಹಿತರಾದ ಎಷ್ಟು ಗಿರಣಿಯ ಒಡೆಯರು ಈ ರೀತಿಯಾಗಿ ನಡೆದುಕೊಳ್ಳಲು ಸಿದ್ಧರಾಗಿದ್ದಾರೆ? ಅವರಲ್ಲಿ ಒಬ್ಬಿಬ್ಬರನ್ನಾದರೂ ತೋರಿಸಬಹುದೇ? ಇದರ ವಿರುದ್ಧವಾಗಿ, ಮಹಾತ್ಮರ ಸಂಬಂಧವುಳ್ಳ ಕೂಲಿಕಾರರ ಸಂಘಗಳು ಒಂದೇಸವನೆ ಹೋರಾಡುತ್ತಲಿವೆ. ಇದರಅರ್ಥವೇನು? ಇಂದಿಗೂ ಕೂಲಿಕಾರರಿಗೆ ಗಿರಣಿಯ ಒಡೆತನವು ದೊರೆತದ್ದು ನಮಗಂತೂ ಕಂಡುಬಂದಿಲ್ಲ. ನಿಜವಾಗಿಯೂ ವಿಚಾರ ಮಾಡಿದರೆ, ಇವರಿಗೆ ಪಂಚರಾಗಲು ಏನು ಅಧಿಕಾರ? ಧನಿಕನಷ್ಟೇ ಕೂಲಿಕಾರನಿಗೂ ಗಿರಣಿಯ ಮೇಲೆ ಒಡೆತನವಿದ್ದ ಮೇಲೆ, ಧನಿಕನು ಪಂಚನು ಹೇಗಾಗುವನು? ಈ ಮಾತಿನಲ್ಲೇನೂ ಹುರುಳಿಲ್ಲ. ಧನಿಕರು ಪಂಚರಂತೆ ನಡೆದರೆ ತೀರಿತೆ? ಹಾಗಾದರೆ ಒಬ್ಬನು ಇನ್ನೊಬ್ಬನ ಆಸ್ತಿಯನ್ನುಹರಣಮಾಡಿ ನಿನ್ನ ಕಲ್ಯಾಣದ ಸಲುವಾಗಿಯೇ ನನ್ನ ಹತ್ತರಇಟ್ಟುಕೊಂಡಿದ್ದೇನೆ. ನಿನಗಾಗಿಯೆ ಅದನ್ನು ವೆಚ್ಚಮಾಡುತ್ತೇನೆ ಎಂದು ಹೇಳಿದರೆ ತಪ್ಪೇನು? ಇದರಂತೆಯೆ ಬ್ರಿಟಿಶರು ಭಾರತವನ್ನು ಭಾರತೀಯರಿಗೆ ಹಿತ

ವಾಗುವಂತೆ ಆಳುತ್ತೇವೆ. ನಾವು ಪಂಚರು ಎಂದು ಹೇಳಿದರೆ ಮಹಾತ್ಮರ ಉತ್ತರವೇನು? ಬ್ರಿಟಿಶರು ಭಾರತೀಯರನ್ನು ಸುಲಿದು ಭಾರತವನ್ನು ಕೈಯಲ್ಲಿಟ್ಟುಕೊಂಡಂತೆ, ಶ್ರೀಮಂತರು ಬಡವರ ಶ್ರಮವನ್ನು ಸುಲಿದೇ ಬಂಡವಲವನ್ನು ಇಟ್ಟುಕೊಂಡಿರುವರು. ಆದ್ದರಿಂದ ಬ್ರಿಟಿಶರ ಆಳಿಕೆಯನ್ನು ಮುಕ್ತಾಯಗೊಳಿಸಿ, ಭಾರತವನ್ನು ಸ್ವತಂತ್ರ ಮಾಡುವದು ಎಷ್ಟು ಪವಿತ್ರವೂ ಧರ್ಮವೂ ಆಗಿರುವದೋ, ಅಷ್ಟೇ ಶ್ರೀಮಂತರ ಸುಲಿಗೆಯನ್ನು ನಿಲ್ಲಿಸಿ ಬಡವರನ್ನು ಆರ್ಥಿಕ ದಾಸ್ಯದಿಂದ ಮುಕ್ತ ಮಾಡುವದು ನ್ಯಾಯವಾಗಿರುವದು.

ಮಹಾತ್ಮರ ಈ ಎಲ್ಲ ಮಾತುಗಳು ಅವಲಂಬಿಸಿದ್ದುದು, ಹೃದಯ ಪರಿವರ್ತನದ ಮೇಲೆ? ಆದರೆ ಅದು ಯಾವಾಗ ಆಗುವದು? ಮಹಾತ್ಮರ ಜೀವಿತಕಾಲದಲ್ಲಿಯೇ ಆಗದ ಮಾತು, ಮಹಾತ್ಮರ ನಂತರ ಆಗುವದೆಂದು ನಂಬಲಿಕ್ಕಾದೀತೆ? ಇದಕ್ಕಾಗಿ ಮಹಾತ್ಮರ ಯೋಜನೆ ಏನಿದೆ? ಆ ಯೋಜನೆಯು ಪರಿಣಾಮಕಾರಕವಾಗಿಯೂ, ಸ್ವಯಂಜನಕವಾಗಿಯೂ ಇರಬೇಕಲ್ಲವೇ? ಹೃದಯಪರಿವರ್ತನವು ಒಂದು ವ್ಯಕ್ತಿಯದಲ್ಲ. ಬಂಡವಲದಾರ ವರ್ಗದ್ದೇ ಆಗಬೇಕು. ಈ ಹೃದಯ ಪರಿವರ್ತನದ ಕಾರಖಾನೆಯು ಇನ್ನೂ ನಮ್ಮ ಕಣ್ಣಿಗಂತೂ ಬೀಳಲೊಲ್ಲದು. ಮಹಾತ್ಮರ ಕಾರಖಾನೆಯಲ್ಲಿಯೂ ಇನ್ನೂ ಯಾರೂ ಹೊರಬಿದ್ದಂತೆ ಕಾಣುವದಿಲ್ಲ.

ಹೃದಯಪರಿವರ್ತನದ ಈ ತತ್ವಜ್ಞಾನವು ವ್ಯವಹಾರ್ಯವಲ್ಲವೆಂದು ಸಾಮ್ಯವಾದವು ಹೇಳುವದು. ಸ್ವಾರ್ಥಬುದ್ಧಿಯ ಮೇಲೆ, ಪಾಶ್ಚಾತ್ಯ ಸಾಮ್ಯವಾದವು ರಚಿಸಲ್ಪಟ್ಟಿದೆ ಎಂದು ಮಹಾತ್ಮರ ಆರೋಪ. ನಿಜವಾಗಿಯೂ ವಿಚಾರ ಮಾಡಿದರೆ, ಸಾಮ್ಯವಾದಿಗಳಿಗೆ, ಮಾನವ ಸ್ವಭಾವದ ಬಗ್ಗೆ ಇಂತಹ ಸಂಕುಚಿತ ಭಾವನೆಗಳಿದ್ದರೆ, ಸಾಮುದಾಯಿಕ ಹಿತದ ಸಂಬಂಧವುಳ್ಳ ಸಮಾಜದ ನಿರ್ಮಾಣವೇ ತಮ್ಮ ಧ್ಯೇಯವೆಂದು ಸಾಮ್ಯವಾದಿಗಳು ಎಂದೂ ಹೇಳುವ ಸಾಹಸ ಮಾಡುತ್ತಿರಲಿಲ್ಲ. ವಿಶಾಲವಾದ ತತ್ವಗಳ ಮೇಲೆ, ಸಮಾಜದ ರಚನೆಯನ್ನು ಮಾಡಲು ಮಾನವನ ಸ್ವಭಾವವನ್ನು ಪಲ್ಲಟಿಸಬಹುದೆಂಬ ಬಲವಾದ ನಂಬಿಕೆಯು ಸಾಮ್ಯವಾದ

ಕ್ಕಿದೆ. ಸಂಸ್ಕಾರಗಳು ಉಂಟಾದಂತೆ ಮನಸ್ಸು ಹಿಗ್ಗುತ್ತ ಹೋಗುತ್ತದೆಂದು, ಅದು ಆಶಿಸುತ್ತದೆ.

ಮನಃಶಾಸ್ತ್ರವನ್ನು ಪೂರ್ಣವಾಗಿ ಅರಿತೇ ಸಾಮ್ಯವಾದವು ಹೃದಯಪರಿವರ್ತನ ತತ್ವವನ್ನು ವಿರೋಧಿಸುತ್ತದೆ. ಸಾಮಾಜಿಕ ಪರಿಸ್ಥಿತಿಯು ಒತ್ತಾಯವೇ ಮಾನವನ ಆಚಾರವನ್ನು ರೂಪಗೊಳಿಸುವದು. **ಧನಿಕನು ದುಷ್ಟನೆಂದು ಬಡವನ ಹಣವನ್ನು ಸೆಳೆಯುವದಿಲ್ಲ.** ಸಾಮಾಜಿಕ ಘಟನೆಯೇ ಮಾಡಲು ಹಚ್ಚುತ್ತದೆ. ಆದುದರಿಂದ ಸಮಾಜದ ಸಂಘಟನೆಯಲ್ಲಿಯೇ ತಕ್ಕ ವ್ಯತ್ಯಾಸಗಳಾಗದ ಹೊರತು ಆರ್ಥಿಕ ಸುಲಿಗೆಯು ನಿಲ್ಲಲಾರದೆಂದು ಸಾಮ್ಯವಾದವು ನಂಬುವದು. ಇಂಥ ಬದಲಾವಣೆಗಳಾದರೆ, ಸುಲಿಗೆಯು ನಿಲ್ಲುವದು. ಸ್ವಭಾವವು ಪಲ್ಲಟವಾಗುವದು. ವ್ಯಕ್ತಿತ್ವವು ನಾಶವಾಗಿ ಸಮಷ್ಟಿಯ ಜೀವನವು ಉದಯವಾಗುವದು. ನವಮನ್ವಂತರಕ್ಕೆ ಪ್ರಾರಂಭವಾಗುವದು. ಇದು ಮನಸ್ಸಿನೊಳಗಿನ ಮಂಡಿಗೆಯಲ್ಲ. ಇಂದು ರಶಿಯದ ಪ್ರಯೋಗಶಾಲೆಯಲ್ಲಿ ಸಿದ್ಧವಾದ ಸಿದ್ಧಾಂತ. ಶೀವ್ರ್ಡ್ ಎಡ್ಡಿಯವರು, “ ರಶಿಯದಲ್ಲಿ ಸ್ವಂತ ಆಸ್ತಿಯಾಗಲೀ ಸ್ವಂತ ಲಾಭದ ಸಂಬಂಧವಾಗಲಿ ಇರದಿರುವದರಿಂದ ಸೇವಾಸಂಕಲ್ಪವು ಹೆಚ್ಚು ಹೆಚ್ಚು ಪ್ರಮಾಣದಲ್ಲಿ ವ್ಯಕ್ತವಾಗುತ್ತಿದೆ ” ಎಂದು ತಮ್ಮ ಪುಸ್ತಕದ ಅವತರಣಿಕೆಯಲ್ಲಿ ಹೇಳಿರುವರು. ಇಲ್ಲಿ ಆತ್ಮವು ರಶಿಯರಿಗೆ, ಉತ್ತೇಜನಕರವಾಗಿಯೇ ಉತ್ತರ ಕೊಡುತ್ತಿರುವದು.

ಇನ್ನೊಂದು ಮಾತನ್ನು ಮಹಾತ್ಮರು ಹೇಳಿದ್ದು ಕಂಡುಬರುವದು. ನಮ್ಮ ಅಸಂಖ್ಯಾತ ರೈತರ ಅಂತಃಕರಣವನ್ನು ಹೊಕ್ಕು ನೋಡಿದರೆ, ಅವರಲ್ಲಿ ಧನಿಕರ ಸಂಪತ್ತನ್ನು ಕಿತ್ತುಕೊಳ್ಳಬೇಕೆಂಬುದಿಲ್ಲವೆಂದು. ಈ ಮಾತಿನಲ್ಲಿ ಏನೂ ಹುರುಳಿಲ್ಲ. ಇಂದು ರೈತರು ಅಜ್ಞಾನಿಗಳಾಗಿದ್ದಾರೆ. ಅವರಿಗೆ ತಮ್ಮ ಸುಲಿಗೆಯು ಹೇಗೆ ನಡೆದಿದೆ ಎಂಬುದೇ ಗೊತ್ತಿಲ್ಲ. ಇಂದು ಲಕ್ಷಾವಧಿ ಅಸ್ಪೃಶ್ಯರು ಮನೆಯಲ್ಲಿ ಕರೆದು ಉಣಲು ಬಡಿಸಿದರೆ ಬ್ರಾಹ್ಮಣರನ್ನು ಮುಟ್ಟುವದು ಮಹಾಪಾಪವೆಂದು ಹೇಳುವದಿಲ್ಲವೇ?

ಇವರ ಮಾತನ್ನು ಕೇಳಿಕೊಂಡು ಮಹಾತ್ಮರು ಹರಿಜನೋದ್ಧಾರವನ್ನು ಬಿಡುವರೋ? ಅದರಂತೆ ಸಮಾಜದ ಅಧಃಪತನದ ಕಾರಣವು ತಿಳಿದ ಮೇಲೆ, ಅದನ್ನು ಸರಿಪಡಿಸುವದು ಮಾನವನ ಕರ್ತವ್ಯವು. ಇದನ್ನೇ ಸಾಮ್ಯವಾದವು ಬೋಧಿಸುತ್ತದೆ.

ಮಹಾತ್ಮರು ಹೋಗಹೋಗುತ್ತ ಪಂಡಿತ ಜವಾಹರಲಾಲರೂ ರಾಷ್ಟ್ರೀಕರಣವೆಂದು ಹಗಲೆಲ್ಲ ಹೇಳುತ್ತಾರೆ. ಅದಕ್ಕೆ ಬೆದರಬೇಡಿರಿ, ವ್ಯಕ್ತಿಗಳ ವಶದಲ್ಲಿರಿಸದೆ, ಜನಾಂಗಕ್ಕೆ ಆಸ್ತಿಯನ್ನು ಇಟ್ಟುಕೊಳ್ಳಲಿಕ್ಕೆ ಬರುವದಿಲ್ಲೆಂದು ಹೇಳಿದ್ದಾರೆ. ಈ ವಿಷಯುವನ್ನು ನಾವು ರಾಷ್ಟ್ರೀಕರಣವೆಂಬ ಪ್ರಕರಣದಲ್ಲಿ ವಿಸ್ತಾರವಾಗಿ ವರ್ಣಿಸಿದ್ದೇವೆ. ಸಾಮ್ಯವಾದವು ಉತ್ಪಾದನದ ಸಾಧನಗಳಾದ ಭೂಮಿ, ಖಣಿ, ಕಾರಖಾನೆ ಮೊದಲಾದವುಗಳ ರಾಷ್ಟ್ರೀಕರಣ ಮಾಡಲು ಬಯಸುತ್ತದೆ. ಇಂತಹ ಆಸ್ತಿಗಳನ್ನು ರಾಷ್ಟ್ರಕ್ಕೆ ತನ್ನ ಅಂಕಿತದಲ್ಲಿಟ್ಟುಕೊಳ್ಳಲು ಕಷ್ಟವಿಲ್ಲ. ಅವು ವ್ಯಕ್ತಿ ಒಡೆತನಕ್ಕೆ ಇರಬಾರದೆಂಬುದೇ ಅದರ ಸಿದ್ಧಾಂತ. ಯಾಕಂದರೆ, ಅವುಗಳೊಂದಿಗೆ ಸಕಲ ಸಮುದಾಯದ ಹಿತಸಂಬಂಧಗಳು ಬೆರೆತಿರುತ್ತವೆ. ರಾಷ್ಟ್ರವು ಅವುಗಳನ್ನು ತನ್ನ ನೇತೃತ್ವದಿಂದಲೇ ನಡೆಯಿಸುವದು. ಬಂದ ಹುಟ್ಟುವಳಿಯನ್ನು ರಾಷ್ಟ್ರದ ದೃಷ್ಟಿಯಿಂದ ಸಮನಾಗಿ ಹಂಚುವದು. ಇವೇ ರಾಷ್ಟ್ರೀಕರಣ ಹಾಗೂ ವಿತರಣಗಳು. ಜನಾಂಗಕ್ಕೆ ಅರ್ಥಾತ್ ರಾಷ್ಟ್ರಕ್ಕೆ ಆಸ್ತಿಯನ್ನು ಇಟ್ಟುಕೊಳ್ಳುವದು ಸಾಧ್ಯವಿಲ್ಲ ಎಂದು ಅನ್ನುವ ಮಾತಿಗೆ ಅರ್ಥವೇ ಇಲ್ಲ.

ಇನ್ನು ಉಳಿದ ಪ್ರಶ್ನೆಯೆಂದರೆ ಖಾದಿ. ಖಾದೀ ಮುಖಾಂತರ ಸಾಮ್ಯವಾದ. ಇದರ ಮುಖಾಂತರ ಸಾಮ್ಯವಾದವು ಹೇಗೆ ಜೀವನದಲ್ಲಿಳಿಯುವದೋ ನಾವರಿಯೆವು. ಭಾರತದ ಸದ್ಯದ ಪರಿಸ್ಥಿತಿಯಲ್ಲಿ ಬಡವರಿಗೆ, ಖಾದಿಯು ಅನ್ನಕ್ಕೆ ದಾರಿ ಎಂಬುದರಲ್ಲಿ ಸಂಶಯವಿಲ್ಲ. ಆದರೆ ಇದು ಕೊನೆಯ ವರೆಗೂ ಬಾಳಲಾರದು. ಈಗಿನ ಜಗತ್ತಿನ ಓಟದಲ್ಲಿ ನಾವು ನಿಲ್ಲಬೇಕಾದರೆ, ಗ್ರಾಮೋದ್ಯೋಗಗಳೂ ಖಾದಿಯೂ ನಮ್ಮನ್ನು ಸಲಹಲಾರವು. ಯಂತ್ರಗಳಿಂದಲೇ ಒಡತನವು ತಲೆ ಎತ್ತುತ್ತದೆ. ಸಿರು

ದ್ಯೋಗವು ಬೆಳೆಯುತ್ತದೆ ಎಂದು ಕೆಲವರ ಮತ. ಈ ಪ್ರಶ್ನೆಗೆ ನಾವು ಹಿಂದೆಯೇ ಉತ್ತರ ಕೊಟ್ಟಿದ್ದೇವೆ. ಮಾನವನ ಶ್ರಮ, ವೇಳೆಗಳನ್ನು ಉಳಿಯಿಸಿ, ಸಂಸ್ಕೃತಿಯ ಬೆಳವಣಿಗೆಗೆ, ಅನುಕೂಲತೆಯನ್ನುಂಟು ಮಾಡುವ, ಯಂತ್ರಗಳನ್ನು ದೂಷಿಸಿ ಉಪಯೋಗವಿಲ್ಲ. ಸಾಮ್ಯವಾದವು ಅವುಗಳನ್ನು ಸ್ವಾಗತಿಸುತ್ತದೆ. ಆದರೆ ಆದರ ದೋಷವನ್ನು ನಾಶ ಮಾಡುತ್ತದೆ. ಖಾದಿಯಿಂದ ಬಡ ಜನರಿಗೆ ಉದ್ಯೋಗ ದೊರೆಯಬಹುದು. ಆದರೆ ಸಮಾಜದಲ್ಲಿಯ ಆರ್ಥಿಕ ವಿಷಮತೆಯೂ ಸುಲಿಗೆಯೂ ಎಂದೂ ನಾಶವಾಗಲಾರದು. ಇದಕ್ಕೆ ಸಾಮ್ಯವಾದವೊಂದೇ ಉಪಾಯವು.

ಕೊನೆಯ ಮಾತೆಂದರೆ, ಒಕ್ಕಲಿಗರಿಗೆ ಎಡೆತಡೆಯಿಲ್ಲದೆ ಸುಖವಾಗಿ ಬಾಳುವದಕ್ಕಿಂತ ಹೆಚ್ಚಿನ ಹಂಬಲವಿಲ್ಲ. ಆಸ್ತಿಯು ಅವರ ಹಿತಕ್ಕಾಗಿರುವ ವರೆಗೆ ಅದರ ಒಡೆತನವು ನಿಮ್ಮದಾಗಿರಲು ಅವರ ತೊಂದರೆಯಿಲ್ಲ.

ಈ ಮಾತನ್ನು ಸ್ವಾತಂತ್ರ್ಯದ ಪುರಸ್ಕರ್ತರಲ್ಲದವರು ಹೇಳಬೇಕು. ಮಹಾತ್ಮರು ಹೇಳಿದ್ದನ್ನು ನೋಡಿ ಆಶ್ಚರ್ಯವಾಗುತ್ತದೆ. ಬ್ರಿಟಿಶರು ನಮಗೆ ಸುಖವಾಗುವಂತೆ ಆಳಿದರೆ, ನಮಗೆ ಸ್ವರಾಜ್ಯ ಬೇಡವೇ? ಏತಕ್ಕಾಗಿ ಈ ಸ್ವಾತಂತ್ರ್ಯದ ಹೋರಾಟ! ಇಲ್ಲ. ನಮಗೆ ಸುರಾಜ್ಯ ಬೇಕಾಗಿಲ್ಲ, ಸ್ವರಾಜ್ಯವು ಬೇಕಾಗಿದೆ. ಇಲ್ಲಿ ಹೇಗೆ ಸ್ವಾತಂತ್ರ್ಯದ ತತ್ವವು ಪ್ರತಿಪಾದಿಸಲ್ಪಡುವದೋ ಹಾಗೆಯೇ ಶ್ರೀಮಂತರ ಕೃಪೆಗೆ, ಪಾತ್ರರಾಗುವದು ನಮಗೆ ಬೇಕಿಲ್ಲ. ಅವರ ಒಳ್ಳೇತನವನ್ನು ನಾವು ಒಪ್ಪಬಹುದು. ಆದರೆ ನಮ್ಮ ಒಡೆತನವು ಮಾತ್ರ ನಮಗೆ ಬೇಕೆನ್ನುವೆವು. ಅದು ಪ್ರತಿಯೊಬ್ಬನ ಜನ್ಮಸಿದ್ಧ ಹಕ್ಕು. ಅದನ್ನೇ ಸಾಮ್ಯವಾದವು ಸಾರುತ್ತಲಿದೆ.

ಮಹಾತ್ಮರ ಎಲ್ಲ ಮಾತುಗಳನ್ನೂ ವಿಮರ್ಶಪೂರ್ವಕವಾಗಿ ವಿಚಾರಿಸಿದ್ದಾಯಿತು. ಅವರು ದೊಡ್ಡವರು, ಮಹಾತ್ಮರು. ಪವಿತ್ರ ಅಂತಃಕರಣದವರು. ಶುದ್ಧಬುದ್ಧಿಯವರು. ಅವರು ಸದುದ್ದೇಶದಿಂದಲೇ ಪ್ರೇರಿತರಾಗಿರುವರೆಂಬಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ಆದರೆ ಅವರ ಈ ವಾದವು ದುರ್ಬಲವಾಗಿದೆ. ಸಮಾಜದ ರೋಗಗಳನ್ನು

ಕಿತ್ತೊಗೆಯಲಾರದು. ಮಹಾತ್ಮರ ದರಿದ್ರನಾರಾಯಣನ ಸೇವೆಯನ್ನು ಪೂರ್ಣಗೊಳಿಸಲು ಸಾಮ್ಯವಾದವೊಂದೇ ಸಮರ್ಥವು.

ಗಾಂಧೀವಾದವನ್ನು ಪೂರ್ಣವಾಗಿ ವಿವರಿಸಿ ಉತ್ತರ ಕೊಡಲಾಯಿತು. ಆದರೆ ಕೈಯಲ್ಲಿ ದೊಣ್ಣೆಯನ್ನು ತೆಗೆದುಕೊಂಡು, ಸಾಮ್ಯವಾದವನ್ನು ಹೊಡೆದೋಡಿಸಲು **ನಾಝಿಝಮ್ ಫ್ಯಾಸಿಝಮ್**ಗಳು ಬೆನ್ನಟ್ಟಿವೆ. ಅವುಗಳ ಸಮಾಚಾರವನ್ನು ತೆಗೆದುಕೊಳ್ಳದೆ ಸಾಮ್ಯವಾದವು ಬಾಳುವಂತೆಯೇ ಇಲ್ಲ. ಆದುದರಿಂದ ಅವುಗಳ ಸ್ವರೂಪ ವರ್ಣನೆಯು ಮುಂದಿನ ಪ್ರಕರಣದಲ್ಲಿ.

---

# ಸಾಮ್ಯವಾದದ ಶತ್ರುಗಳು

೧೨



ಬಂಡವಲವಾದದ ಅತಿರೇಕವು ಸಾಮ್ಯವಾದದ ಹುಟ್ಟಿಗೆ ಕಾರಣ ವಾಯಿತೆಂದು ಈ ಮೊದಲೇ ವಿವೇಚಿಸಿದ್ದೇವೆ. ಸಾಮ್ಯವಾದವು ಕನಸಿನ ಸಾಮ್ರಾಜ್ಯವೆಂಬ ಭಾವನೆಯು ಎಲ್ಲಿಯ ವರೆಗೆ ಇತ್ತೋ ಅಲ್ಲಿಯ ವರೆಗೆ, ಬಂಡವಲದಾರರು ಅದರ ಕಡೆಗೆ ಕಣ್ಣೆತ್ತಿ ಕೂಡ ನೋಡಿದ್ದಿಲ್ಲ. ಆದರೆ ಅದು ರಶಿಯದಲ್ಲಿ ರಾಜ್ಯವನ್ನು ಸ್ಥಾಪಿಸಿ ಜಗತ್ತಿನ ೧/೬ ಪ್ರದೇಶವನ್ನು ವ್ಯಾಪಿಸಿ ಜಗತ್ತಿನಲ್ಲಿ ಹೊಸ ಮನ್ವಂತರವನ್ನು ಪ್ರಾರಂಭಿಸಿದೊಡನೆಯೇ ಇಡೀ ಜಗತ್ತೇ ಇಂದು ಅದರ ಕಡೆಗೆ ನೋಡತೊಡಗಿದೆ. ಬಂಡವಲ ದಾರರು ಗಾಬರಿಗೊಂಡಿದ್ದಾರೆ. ಭವಿಷ್ಯತ್ತಿನಲ್ಲಿ ತಮ್ಮ ಸ್ಥಾನಮಾನ ಗಳೇನೆಂದು ಬಂಡವಲವಾದೀ ರಾಷ್ಟ್ರಗಳು ವಿಚಾರಮಗ್ನವಾಗಿವೆ. ಅವು ತಮ್ಮ ಬಣ್ಣವನ್ನು ಬದಲಿಸತೊಡಗಿವೆ. ತಮ್ಮ ಆಳಿಗಾಲವು ಬಂದಿತೆಂದು ಅವುಗಳಿಗೆ ಹೊಳೆದುಹೋಗಿದೆ. ಆವು ವಿಶ್ವಪ್ರಯತ್ನ ಮಾಡಿ, ತಮ್ಮ ಒಡೆತನವನ್ನು ಉಳಿಸಿಕೊಳ್ಳುವ ಪ್ರಯತ್ನಕ್ಕೆ ಬಿದ್ದಿವೆ. ಮುಸಲೋನಿಯ ಫ್ಯಾಸಿಝಮ್‌ವು, ಹಿಟ್ಲರನ ನಾಝಿಝಮ್‌ವು ಬಂಡವಲವಾದದ ಎರಡನೆಯ ವೇಷ. ಈ ರೂಪದಿಂದ ಸಾಮ್ಯವಾದ ವನ್ನು ಮಣ್ಣುಗೂಡಿಸುವ ಪ್ರಯತ್ನ ನಡೆದಿದೆ.

ಬಂಡವಲವಾದವು ಇಂದು ಸಾಮ್ಯವಾದದ ಎದುರಿಗೆ, ಮರ್ಯಾದೆ ಯಿಂದ ಮೋರೆ ಎತ್ತದಂತಾಗಿದೆ. ಬಂಡವಲದಾರ, ಬಂಡವಲವಾದವೆಂಬ ಹೆಸರು ಇಟ್ಟುಕೊಳ್ಳಲು ಇಂದಿನ ಜಗತ್ತಿನಲ್ಲಿ ನಾಚಿಕೆಯಾಗುತ್ತದೆ. ಆದ್ದರಿಂದಲೇ ಮುಸಲೋನಿಯು ಫ್ಯಾಸಿಝಮ್‌ವು ಬಂಡವಲವಾದದ ರೂಪವಲ್ಲವೆಂದು ಹೇಳತೊಡಗಿದ್ದಾನೆ. ಹಿಟ್ಲರನಂತೂ ತನ್ನ ವಾದಕ್ಕೆ

ಉಗ್ರ ರಾಷ್ಟ್ರೀಯತ್ವವೆಂದು ಹೆಸರಿಟ್ಟಿದ್ದಾನೆ. ಬೇಕಾದ ವೇಷವನ್ನು ಅವರು ಹಾಕಲಿ, ಮೂಲ ಸ್ವರೂಪವೇನೂ ಬದಲಾಗುವದಿಲ್ಲ. ನಮ್ಮ ವಾದಗಳಿಗೆ ಬಂಡವಲವಾದವೆಂದು ಹೇಳಲು ಬರುವದಿಲ್ಲ, ನಾವೂ ಸಾಮ್ಯವಾದಿಗಳಂತೆಯೇ ಜಗತ್ತಿನ ಕಲ್ಯಾಣಕ್ಕಾಗಿಯೇ ಯತ್ನಿಸುತ್ತ ಲಿದ್ದೇವೆ ಎಂದು ಹೇಳತೊಡಗಿದ್ದಾರೆ. ಈಗಾಗಲೇ ಇವುಗಳ ಸ್ವರೂಪ ಹೊರಬಿದ್ದಿದೆ.

ಬಂಡವಲವಾದದ ಪರಿಣಾಮಗಳನ್ನು ನಾವು ಎರಡು ರೀತಿಯಲ್ಲಿ ವಿಭಾಗಿಸಬಹುದು. ಒಂದು ಆರ್ಥಿಕ ಅಸಮಾನತೆಯಿಂದ ಉಂಟಾದ ಬಡತನ, ಪರತಂತ್ರ, ನಿರುದ್ಯೋಗತನ ಮೊದಲಾದವುಗಳು. ಇನ್ನೊಂದು ಯಾವಾಗಲೂ ಯುದ್ಧದ ಭೀತಿ. ಇವರ ವಾದದಲ್ಲಿಯಾದರೂ ಏನಿದೆ? ಇಬ್ಬರೂ ಯುದ್ಧದ ಪರಮ ಭಕ್ತರು. ಅದೇ ಅವರದ್ವೈತವು. ಮಾನವನ ಉನ್ನತಿಗೆ, ಯುದ್ಧವೇ ಪರಮಸಾಧನವೆಂದು ಇವರ ಮತ. ಮುಸ ಲೋನಿಯು ರಾಷ್ಟ್ರೀಯವಾದಿಯು. ಆದ್ದರಿಂದ ಇಟಲಿಯ ಮಾನ ಮರ್ಯಾದೆ, ಸ್ವಾರ್ಥಗಳನ್ನು ಬೆಳೆಯಿಸುವದೇ ಇವನ ಗುರಿಯು. ಇಷ್ಟೇ ಅಲ್ಲ. ಇಟಾಲಿಯನ್ನರ ಹೊರತು ಅನ್ಯ ಜಾತಿ ಪಂಥಗಳಿಗೆ ಇವರಲ್ಲಿ ಸ್ಥಾನವಿಲ್ಲ. ಮುಸಲೋನಿಯು ನಾಝಿಝಮ್‌ದ ಪ್ರೋತ್ಸಾಹಕನಿದ್ದನು. ಫ್ಯಾಸಿಝಮ್‌ದ ಜರ್ಮನ ಸಂಸ್ಕರಣವೇ ನಾಝಿಝಮ್ ಎಂದು ತಿಳಿಯುತ್ತಿದ್ದನು. ಆದರೆ ಹಿಟ್ಲರನು ಇವನ ಮಂತ್ರವನ್ನೇ ಇವನಿಗೆ ತಿರುಗಿಸಿ ಜಾತಿ ಭಾಷೆಗಳಿಂದ ಆಸ್ಟ್ರೀಯವು ಜರ್ಮನಿ ಇದ್ದುದರಿಂದ ಅದು ಜರ್ಮನ ಜನಾಂಗದ ಸ್ವತ್ತು ಎಂದು ಘೋಷಿಸಿದ ಕೂಡಲೆ ಮುಸಲೋನಿಯು ಎಚ್ಚತ್ತನು. ಇಬ್ಬರೂ ಕೇವಲ ತಮ್ಮ ಜಾತಿಗಳಿಗಾಗಿಯೇ ತಮ್ಮ ದೇಶವೆಂದು ಪ್ರತಿಪಾದಿಸು ವವರು. ತಮ್ಮ ರಾಷ್ಟ್ರವು ವಿಸ್ತಾರವಾಗಬೇಕು, ಸಾಮ್ರಾಜ್ಯವು ಬೆಳೆಯಬೇಕು ಎಂಬ ಭಾವನೆಯವರು. ಇಟಾಲಿಯನರು ಸರ್ವರಿಗಿಂತಲೂ ಶ್ರೇಷ್ಠರು. ಆದುದರಿಂದ ಎಲ್ಲ ಜನಾಂಗಗಳು ಅವರಿಗೆ ತಲೆಬಾಗಬೇಕೆಂದೇ ಮುಸಲೋನಿಯ ಮತ. ಇಲ್ಲದಿದ್ದರೆ, ಬಾಗುವಂತೆ ಮಾಡುವದು ಇಟಾಲಿಯನ್ನರ ಕರ್ತವ್ಯ. ಇಟಲಿಯ ಜನಸಂಖ್ಯೆಯು ಬೆಳೆಯಬೇಕು,

ಜಗತ್ತಿನಲ್ಲಿ ತನ್ನ ಕೀರ್ತಿಯು ಹೆಚ್ಚಬೇಕು, ತಾವು ಆಳಬೇಕು ಎಂಬುದೇ ಇವನ ಮಂತ್ರ. ಈ ಬುದ್ಧಿಯು ಯಾವಾಗಲೂ ಯುದ್ಧವನ್ನು ಪ್ರೋತ್ಸಾಹಿಸುವದು ಸ್ವಾಭಾವಿಕವಿದೆ. ಆದ್ದರಿಂದಲೇ ಮಾನವ ಜನಾಂಗವನ್ನೇ ಧ್ವಂಸಮಾಡುವ ಜ್ವಾಲಾಗ್ರಾಹಿ ಯುದ್ಧಸಾಮಗ್ರಿಗಳಿಂದ ಇಟಲಿಯು ತುಂಬಿ ತುಳುಕುತ್ತಲಿದೆ.

ಹಿಟ್ಲರನ ಪರದೇಶದ ನೀತಿ, ರಾಜನೀತಿಗಳಂತೂ ಇದಕ್ಕಿಂತಲೂ ಸ್ಪಷ್ಟವಿವೆ. ಅವನು ಬರೆದ "**ನನ್ನ ಯುದ್ಧ**" ಎಂಬ ಪುಸ್ತಕದಲ್ಲಿ ತನ್ನ ಧ್ಯೇಯ ಧೋರಣಗಳನ್ನು ಈ ರೀತಿಯಾಗಿ ಉಲ್ಲೇಖಿಸಿದ್ದಾನೆ.

**"ಮನುಷ್ಯನು (ವ್ಯಕ್ತಿಯು) ಸರ್ವಾಧಿಕಾರಿಯಾಗಿ, ನಿರಂಕುಶ ಪ್ರಭುತ್ವವನ್ನು ಮಾನವ ಜನಾಂಗದಲ್ಲಿ ಎಂದು ಪಡೆಯುವನೋ ಅಂದೇ ಜಗತ್ತಿನಲ್ಲಿ ನಿಜವಾದ ಶಾಂತತೆಯು ನೆಲೆಗೊಳ್ಳುತ್ತದೆ." (ಪು. ೩೧೫)**

**"ಶ್ರೇಷ್ಠತರವಾದ ಶಸ್ತ್ರಾಸ್ತ್ರಗಳನ್ನು ಸಿದ್ಧಪಡಿಸುವದು ಮತ್ತು ಸಿದ್ಧಪಡಿಸಲು ಯಾವ ಆತಂಕವೂ ಇಲ್ಲದಂತೆ ಮಾಡುವದು ಇವೇ ರಾಷ್ಟ್ರದ ಆಂತರಿಕ ಉದ್ದೇಶವಿರಬೇಕು." (ಪು. ೬೮೯)**

**"ಯಾವುದೇ ಗೆಳೆತನವಾಗಲಿ, ಇಲ್ಲವೆ-ಒಪ್ಪಂದವಾಗಲಿ ಯುದ್ಧದ ಸಾಮರ್ಥ್ಯವಿಲ್ಲದೆ, ಬಾಳಲಾರವು. ಅವು ವ್ಯರ್ಥ." (ಪು. ೭೪೯)**

ನಾಝಿಝಮವು ರಾಷ್ಟ್ರೀಯವಾದಕ್ಕಿಂತಲೂ ಒಂದು ಹೆಜ್ಜೆ ಮುಂದೇ ನಡೆದಿದೆ. ಶುದ್ಧ ಆರ್ಯರದೇ ರಾಜ್ಯವಾಡಲು ಬಯಸುತ್ತದೆ. ಆದುದರಿಂದ ಅನೇಕ ತಲೆಗಳ ವರೆಗೆ ತಂದೆತಾಯಿಗಳ ರಕ್ತಶುದ್ಧಿಯ ಕಡೆಗೆ ಅದು ಲಕ್ಷ್ಯ ಪೂರೈಸಹತ್ತಿದೆ. ಎರಡನೆಯ ಜಾತಿಯವರನ್ನು ದ್ವೇಷಿಸುವದಲ್ಲದೆ, ಅವನ್ನು ನಾಶಮಾಡಲು ಕೂಡ ಯತ್ನಿಸುತ್ತಿದೆ. ಅವರ ಮತದಂತೆ ಜಗತ್ತಿನಲ್ಲಿ ಜರ್ಮನರ ಹೊರತು ಯಾರೂ ಆರ್ಯರಿಲ್ಲ. ಆರ್ಯರು ಭಿನ್ನ ಜಾತಿಯವರೊಡನೆ ರಕ್ತಸಂಬಂಧ ಮಾಡಕೂಡದು. ಇಷ್ಟೇ ಅಲ್ಲ, ಎಷ್ಟೋ ಶತಮಾನಗಳಿಂದ ಜರ್ಮನಿಯಲ್ಲಿ ವಾಸಮಾಡಿ, ವೇಷ, ಭಾಷೆ, ಸಂಸ್ಕೃತಿಗಳಲ್ಲಿ ಸಮರಸರಾದ, ಯಹುದಿಯರನ್ನು ಕೂಡ ದ್ವೇಷಿಸುತ್ತಿರುವರು. ಅವರೊಡನೆ ಯಾರೂ ಮದುವೆಯಾಗಕೂಡದು, ಸಂಬಂಧವಿರಕೂಡದು, ಎಂದು ಹಿಟ್ಲರನ ಕಟ್ಟಪ್ಪಣೆ. ಅಲ್ಲದೆ

ಅವರನ್ನು ಜರ್ಮನಿಯಿಂದ ತಳ್ಳುವ ಕಾರ್ಯವು ಕೂಡ ಪ್ರಾರಂಭವಾಗಿದೆ. ಅವರ ಕಷ್ಟಗಳನ್ನು ದೇವರೇ ಬಲ್ಲ. ಫ್ಯಾಸಿಸ್ಟರಂತೆ ನಾಝಿಯರೂ ತಮ್ಮ ಸಂತಾನವನ್ನು ಬೆಳೆಯಿಸಲು ಪ್ರಯತ್ನಿಸುತ್ತಿದ್ದಾರೆ. ಅದು ಆ ಕರ್ತವ್ಯವೆಂದೂ ತಿಳಿಯುತ್ತಾರೆ. ಮಕ್ಕಳನ್ನು ಹಡೆಯುವದಕ್ಕಾಗಿ, ಮದುವೆಯಾಗುವವರೆಗೆ ಸರಕಾರದಿಂದ ಮೆಚ್ಚುಗಳನ್ನು ಕೂಡ ಇಟ್ಟಿದ್ದಾರೆ. ಗಂಡು ಹೆತ್ತ ಹೆಣ್ಣುಮಗಳು ಪೂಜೆಗೆ ಯೋಗ್ಯಳು. ಮಕ್ಕಳನ್ನು ಹಡೆದು ಜರ್ಮನಿಗೆ ಪೂರೈಸಿದರೆ, ಜರ್ಮನಿಯ ಸೇವೆ ಮಾಡಿದಂತೆ. ಈ ಎರಡೂ ವಾದಗಳು ಅತ್ಯಂತ ಬಲಿಷ್ಠವಾಗಿ, ಜಗತ್ತಿನ ಶಾಂತತೆಯ ಶತ್ರುಗಳಾಗಿವೆ. ಇದು ಬಂಡವಲವಾದದ ಮತ್ತೊಂದು ರೂಪವಲ್ಲವೆ? ಈ ವಾದಗಳ ಅರ್ಥವೇನು?

ಇವುಗಳ ಆಳಿಕೆಯು ತಮ್ಮ ತಮ್ಮ ನಾಡಿನಲ್ಲಿ ಯಾವ ಸ್ವರೂಪ ದ್ದಿದೆ ಎಂಬುದನ್ನಷ್ಟು ನೋಡೋಣ.

ಈ ಎರಡೂ ರಾಷ್ಟ್ರಗಳು ಸುಲಿಯುವ, ಮತ್ತು ಸುಲಿಸಿಕೊಳ್ಳುವ, ಕೊಳ್ಳೆಹೊಡೆಯುವ, ಹೊಡೆಯಿಸಿಕೊಳ್ಳುವ ಅರ್ಥಾತ್ ಬಂಡವಲ ವರ್ಗ ಹಾಗೂ ಶ್ರಮಜೀವಿ ವರ್ಗ, ಈ ಎರಡೂ ವರ್ಗಗಳನ್ನು ಜೀವಂತವಿಡಲು ಇಚ್ಛಿಸುತ್ತವೆ. ಸಾಮ್ಯವಾದಕ್ಕೆ ಭಯಭೀತರಾದ ಬಂಡವಲದಾರರು ಮುಸಲೋನಿ, ಹಾಗು ಹಿಟ್ಲರರ ಇಝಮುಗಳ ಸಿದ್ಧಿಗೆ, ತಮ್ಮ ಬೊಕ್ಕಸದ ಕೀಲಿಕೈಯನ್ನೇ ಅವರ ವಶಮಾಡಿದ್ದಾರೆ. ಬಂಡವಲವಾದದ ಧನದಿಂದ ಪೋಷಿತವಾಗಿ, ಶ್ರಮಜೀವಿಗಳ ಗೋರಿಯ ಮೇಲೆಯೇ ಸ್ಥಾಪಿಸಲ್ಪಟ್ಟ ಈ ಇಝಮುಗಳ ಬಂಡವಲವಾದವಲ್ಲದೆ ಮತ್ತೇನು?

ಈ ಎರಡೂ ಇಝಮುಗಳ ಭೇದವು ಅವುಗಳ ಔದ್ಯೋಗಿಕ ವಿಕಾಸ ದಲ್ಲಿದೆ. ಇಟಲಿಯು ಕೃಷಿಪ್ರಧಾನ ದೇಶ. ಉದ್ಯೋಗ ವ್ಯವಸಾಯ ಗಳು ಅಲ್ಲಿ ಅಷ್ಟು ಬೆಳೆದಿಲ್ಲ. ಇದರಿಂದ ಸಾಮ್ಯವಾದದ ತೀವ್ರತರವಾದ ಬೇಡಿಕೆಗೆ ಅಲ್ಲಿ ಅವಸರವಿಲ್ಲ. ಇದರ ವಿರುದ್ಧವಾಗಿ ಜರ್ಮನಿಯಲ್ಲಿ ಉದ್ಯೋಗ ವ್ಯವಸಾಯಗಳೇ ಹೆಚ್ಚು. ಬಂಡವಲದಾರರ ಸ್ವಾರ್ಥದ ಮೂಲಕ ನಿರುದ್ಯೋಗವು ಭಯಂಕರ ರೂಪವನ್ನು ಧಾರಣ ಮಾಡಿದೆ.

ಯುದ್ಧದಲ್ಲಿ ಪರಾಜಿತವಾಗಿ ದೇಶಗಳನ್ನು ಕಳೆದುಕೊಂಡ ಮೇಲಂತೂ ಅವರ ವ್ಯಾಪಾರೀ ಕ್ಷೇತ್ರವಾದರೂ ಬಹುಸಂಕುಚಿತವಾಗಿ ನಿರುದ್ಯೋಗವು ಅತ್ಯಂತ ಬೆಳೆದು ಅದರ ದುಷ್ಪರಿಣಾಮಗಳೂ ಆದವು. ಈ ಸಮಯದಲ್ಲಿ ಸಾಮ್ಯವಾದವು ತಲೆಯೆತ್ತುವದು ಸ್ವಾಭಾವಿಕವಿತ್ತು.

ಯಂತ್ರಗಳ ಉಪಯೋಗವನ್ನು ಬಂಡವಲವಾದದಲ್ಲಿ ವ್ಯಕ್ತಿಯ ಲಾಭಕ್ಕಾಗಿ ಮಾಡಲ್ಪಡುತ್ತದೆ. ಸಾಮ್ಯವಾದದಲ್ಲಿ ರಾಷ್ಟ್ರಕ್ಕಾಗಿ ಉಪಯೋಗಿಸಲ್ಪಡುತ್ತದೆ. ನಾಝಿಝಮ್‌ದಲ್ಲಿ ಸಾಮ್ಯವಾದದ ಈ ರಾಷ್ಟ್ರೀಕರಣದ ತತ್ವದ ಉಪಯೋಗವನ್ನು ಸ್ವಲ್ಪಮಟ್ಟಿಗೆ ಮಾಡಿದ್ದಾರೆ. ಅಂದರೆ, ಯುದ್ಧದ ವೆಚ್ಚವನ್ನು ಸಿರಿವಂತರ ಮೇಲಷ್ಟೇ ಹೇರಿದ್ದಾರೆ. ಬಂಡವಲದಾರ ಮತ್ತು ಶ್ರಮಜೀವಿಗಳ ವರ್ಗಗಳನ್ನು ನಾಶಮಾಡುವ ಬದಲು ಭದ್ರಪಡಿಸಲು ಯತ್ನಿಸುತ್ತಿದ್ದಾನೆ. ಸಾಮ್ಯವಾದದ ಬೆಳವಣಿಗೆಯನ್ನು ಕಂಡು ಹಿಟ್ಲರನು ಎಷ್ಟೋ ಜನ ಸಾಮ್ಯವಾದಿಗಳನ್ನು ಯಮಸದನಕ್ಕಟ್ಟಿದನು. ಸ್ತ್ರೀಯರು ಮದುವೆಯಾಗಬೇಕೆಂಬ ಉದ್ದೇಶದಿಂದ ಅವರ ಆರ್ಥಿಕ ಸ್ವಾತಂತ್ರ್ಯವನ್ನೂ ಅವರ ಸ್ವತಂತ್ರ ಜೀವನೋಪಾಯವನ್ನೂ ಬಲುಮೆಯಿಂದ ಕಿತ್ತುಕೊಂಡು ಅವರನ್ನು ಭಿಕ್ಷುಕರನ್ನಾಗಿ ಮಾಡಿದ್ದಾನೆ. ಅದರ ಉದ್ದೇಶವಿಷ್ಟೆ. ಹೊಟ್ಟೆಗಾಗಿ, ಪುರುಷರನ್ನು ಅವರು ಅವಲಂಬಿಸಬೇಕು. " ಸ್ತ್ರೀಯರ ಸ್ಥಾನವು ಕಾರಖಾನೆ, ಕಾರ್ಯಾಲಯಗಳಲ್ಲಿರದೆ ಮನೆಯಲ್ಲಿದೆ, ಗೃಹಿಣಿತ್ವ ಹಾಗೂ ಮಾತೃತ್ವವನ್ನು ವಹಿಸುವದರಲ್ಲಿದೆ. ಎಂದು ಘೋಷಣೆಯನ್ನು ಹೊರಡಿಸಿದನು. ನೂರಾರು ವರ್ಷಗಳಿಂದ ಅನೇಕ ಸಂಕಟಗಳನ್ನು ಅನುಭವಿಸಿ, ಸ್ತ್ರೀಯರು ದೊರಕಿಸಿದ ಸ್ವಾತಂತ್ರ್ಯವನ್ನು ಕ್ಷಣಾರ್ಧದಲ್ಲಿ ತನ್ನ ಲೆಕ್ಕಣಿಕೆಯಿಂದ ಸೆಳೆದು ಬಿಟ್ಟನು.

ಪ್ರಗತಿ ವಿರೋಧಕ ಚಳವಳಿಗೆ, ಮೂಢ ಧರ್ಮವೂ ದೇವರ ಮೂಢ ಕಲ್ಪನೆಯು ಒಳ್ಳೇ ಅನುಕೂಲ. ಈ ಮಾತು ಈ ಎರಡೂ ವಾದಗಳಿಗೆ ಸರಿಯಾಗಿ ಅನ್ವಯಿಸುತ್ತದೆ. ಜಗತ್ತಿನ ಪ್ರಗತಿಪರ ವಿಚಾರವನ್ನು ದ್ವೇಷಿಸುವವರಲ್ಲಿ, ರೋಮನ್ ಕ್ಯಾಥೋಲಿಕರಲ್ಲಿ ಬಹುಜನರು. ಮುಸ

ಲೋಸಿಯು ಈ ಧರ್ಮದ ಪರಮಭಕ್ತನು. ಅದರಂತೆ ಹಿಟ್ಲರನ ಕಟ್ಟ ಪ್ಪಣೆಗಳಲ್ಲಿ ವಿದ್ಯಾರ್ಥಿಗಳ ಪ್ರಾರ್ಥನೆಯ ಆಜ್ಞೆಯು ಈ ಮಾತನ್ನು ಸ್ಪಷ್ಟಗೊಳಿಸುತ್ತದೆ.

**« ಹೇ,! ಸರ್ವಶಕ್ತಿನಂತನಾದ ಪರಮಾತ್ಮನೇ! ನಮ್ಮ ಶಸ್ತ್ರಗಳಿಗೆ ವಿಜಯು ವನ್ನು ಕೊಡು. ಯಾವಾಗಲು ನ್ಯಾಯುವನ್ನು ಕೊಡು. ನಮ್ಮ ಜನರಿಗೆ ಆಶೀರ್ವಾದವನ್ನು ಮಾಡು. ನಾವು ಸ್ವಾತಂತ್ರ್ಯದ ಅಧಿಕಾರಿಗಳಿರುವೆವೆಂದು ನಮ್ಮ ಪ್ರತೀತಿಗೆ ತಂದುಕೊಡು. ಎಲೋ! ದೇವರೇ! ನಮ್ಮ ಶಸ್ತ್ರಗಳಿಗೆ ಯಾವಾಗಲೂ ವಿಜಯುವನ್ನು ಕೊಡು!! »**

ಹಿಟ್ಲರನ ಈ ಕಟ್ಟಪ್ಪಣೆಯು ಪೋಪನಂತೆಯೇ ಕಾರ್ಲಮಾರ್ಕ್ಸನ ತತ್ವಜ್ಞಾನವನ್ನಷ್ಟೇ ಅಲ್ಲದೆ, ಡಾರ್ವಿನ್ನನ ವಿಕಾಸವಾದವನ್ನೂ ಕೂಡ ಶಾಲೆಗಳಿಂದ ತಳ್ಳಿಹಾಕಿದೆ.

ಸದ್ಯಕ್ಕಂತೂ ಇವುಗಳ ರೂಪವು ಈ ಪ್ರಕಾರದ್ದಿದೆ. ಈ ಎರಡು ಇಝುಮುಗಳು ದೇಶದ, ಜನಾಂಗದ, ಸಂಸ್ಕೃತಿಯುನ್ನು ಹಿಂದಕ್ಕೆಳೆಯುಲು ಯುತ್ನಿಸುತ್ತಲಿವೆ. ಸ್ತ್ರೀಸ್ವಾತಂತ್ರ್ಯದ ಕಟ್ಟಾ ವಿರೋಧಿಯಿವೆ. ಆದರಂತೆಯೇ ಶ್ರಮಜೀವಿಗಳ, ಕೀಳುಜಾತಿಗಳ ಉದ್ಧಾರಕ್ಕೆ ವಿರೋಧ ವನ್ನು ಮಾಡುತ್ತಲಿವೆ. ಮತ್ತು ಜಗತ್ತಿನಲ್ಲಿ ಯುದ್ಧಕ್ಕೆ ಯಾವಾಗಲು ಉತ್ತೇಜನ ಕೊಡತಕ್ಕಂಥವಾಗಿವೆ. ಈ ವಾದದಿಂದ ಜಗತ್ತಿನ ಕಲ್ಯಾಣವು ಎಂದೂ ಆಗಲಾರದೆಂದು ಮೇಲೆಯೇ ಕಾಣುತ್ತದೆ.

ಜಗತ್ತಿನಲ್ಲಿ ಬಡತನ, ದುಃಖ, ಯುದ್ಧದ ಭೀಕರವಾದ ಅಶಾಂತಿ ಇವುಗಳು ಚಿರಕಾಲವೂ ಉಳಿಯುವಂತೆ, ಈ ಎರಡೂ ಇಝುಮು ಗಳು ಶಕ್ತಿಮೀರಿ ಪ್ರಯತ್ನಿಸುತ್ತಲಿವೆ. ಮಾನವಕೋಟಿಯ ಕಲ್ಯಾ ಣದ ಸದಿಚ್ಛೆಯುಳ್ಳ ಯಾವನೂ ಇಂಥತತ್ವಗಳನ್ನು ಎಂದೂ ಒಪ್ಪಲಾರನು. ಜಗತ್ತಿನ ಶಾಂತಿಗೆ ಸಾಮ್ಯವಾದವೊಂದೇ ಉಪಾಯು. ಅದು ಭಾರತಕ್ಕೆ ಯೋಗ್ಯವಿದೆಯೇ? ಎಂಬುದನ್ನು ವಿಚಾರಿಸುವದೇ ಮುಂದಿನ ಪ್ರಕರಣ.

---

# ಭಾರತವೂ ಸಾಮ್ಯವಾದವೂ

೧೩



ಸಾಮ್ಯವಾದದ ಸಿದ್ಧಾಂತಗಳೇನೋ ಚನ್ನಾಗಿವೆ. ಆದರೆ ಹಿಂದುಸ್ತಾನದ ಪರಿಸ್ಥಿತಿಯು ತೀರ ಭಿನ್ನವಾಗಿದೆ. ಇದು ಔದ್ಯೋಗಿಕ ದೃಷ್ಟಿಯಿಂದ ಹಿಂದುಳಿದ ದೇಶ. ಭಾರತೀಯ ಸಂಸ್ಕೃತಿಯೂ ಪರಂಪರೆಯೂ ಇದಕ್ಕೆ ತೀರ ವಿರೋಧವಾಗಿವೆ. ಬಂಡವಲವಾದವು ಇಲ್ಲಿ ತಲೆಯೆತ್ತಲೇ ಇಲ್ಲ. ಇಲ್ಲೇಕೆ ಈ ಸಾಮ್ಯವಾದ? ಎಂದು ಕೆಲವರು ಆಕ್ಷೇಪಗಳನ್ನೆತ್ತಿ ತಲೆಕುಕ್ಕುತ್ತಿರುವರು. ನಿಜ. ರೋಗವಿದ್ದರೆ ಔಷಧ ಕೊಡಬೇಕು. ಭಾರತವು ರೋಗಪೀಡಿತವಾಗಿಲ್ಲವೆ? ಎಂಬುದೇ ನಮ್ಮ ಪ್ರಶ್ನೆ. ನಮ್ಮ ಸಂಸ್ಕೃತಿಗೆ, ನಮ್ಮ ದೇಶಕ್ಕೆ ಸರಿಹೋಗದಿದ್ದರೆ, ಅವಶ್ಯವಿಲ್ಲದಿದ್ದರೆ ಯಾರು ಸ್ವೀಕರಿಸಬೇಕೆನ್ನುವರು? ಆದರೆ, ಹಿಂದೊಂದು ಉದ್ದೇಶವನ್ನು ಇಟ್ಟುಕೊಂಡು ತತ್ವಗಳನ್ನು ಮುಂದೆಮಾಡಿದರೆ ಅವು ಬಾಳಲಾರವೆಂದೇ ನಮ್ಮ ಅಭಿಪ್ರಾಯ. ವಿಚಾರ ಮಾಡೋಣ,ವಿಮರ್ಶಿಸೋಣ, ಯೋಗ್ಯವಿದ್ದರೆ ಸ್ವಾಗತಿಸೋಣ. ಆದರೆ ಹೊಸದೆಲ್ಲವೂ ಹುಸಿಯೆಂಬ ಗ್ರಹಿಕೆಯಿಂದಲೇ ಮುಂದೆ ಸಾಗಬಾರದೆಂದು ನಮ್ಮ ಇಚ್ಛೆ.

ಸಾಮ್ಯವಾದದ ಜನ್ಮವೇತಕ್ಕೆ? ಜಗತ್ತಿನಲ್ಲಿಯ ಬಡತನವನ್ನು ಕಿತ್ತೊಗೆದು, ವಿಷಮತೆಯನ್ನು ನಾಶಮಾಡಿ, ಆರ್ಥಿಕ ಸಮಾನತೆಯಿಂದ ಮಾನವರಿಗೆ ಸುಖ ಶಾಂತಿ ಸ್ವಾತಂತ್ರ್ಯಗಳನ್ನು ಕೊಡುವದಕ್ಕಾಗಿ.

**ಭಾರತದಲ್ಲಿ ಬಡತನವಿಲ್ಲವೆ?—** ಭಾರತದ ದಾರುಣವಾದ ಬಡತನವು ಭಾರತೀಯರನ್ನು ಕಂಗೆಡಿಸಿದೆ. ಕೋಟ್ಯಾವಧಿ ಜನರು ಅರಹೊಟ್ಟೆಯಿಂದ ಉಪವಾಸ ಸಾಯುತ್ತಲಿದ್ದಾರೆ. ಎಳೆ ಮಕ್ಕಳು ಹಾಲಿಲ್ಲದೆ

ಮರಣಕ್ಕೀಡಾಗತೊಡಗಿವೆ. ದುಡಿಯುವೆವೆಂದರೆ ಕೂಲಿಯಿಲ್ಲ. ನಿರುದ್ಯೋಗವು ಭೀಕರ ನೃತ್ಯವಾಡುತ್ತಲಿದೆ. ಮರ್ಯಾದೆ ಮುಚ್ಚಲು ಬಟ್ಟೆ ಇಲ್ಲದೆ, ಕೋಟ್ಯಾವಧಿ ಜನರು ಅರೆಬತ್ತಲೆ ಅಲೆಯುತ್ತಲಿದ್ದಾರೆ. ಹೊಟ್ಟೆಗಿಲ್ಲದೆ ಲಕ್ಷಾವಧಿ ಜನರು ಕ್ಷಯರೋಗಕ್ಕೆ ತುತ್ತಾಗುತ್ತಲಿದ್ದಾರೆ. ಉಂಡೇನೆಂದರೆ ಅನ್ನವಿಲ್ಲ, ಉಟ್ಟೇನೆಂದರೇ ಬಟ್ಟೆಯಿಲ್ಲ. ಅಂದಮೇಲೆ ಸುಖಶಾಂತಿಗಳೆಲ್ಲಿ? ಭಾರತದ ಈ ಬಡತನವೇ ಮಹಾತ್ಮರನ್ನು ದರಿದ್ರನಾರಾಯಣನ ಸೇವೆಗೆ ಪ್ರೇರಿಸಿಲ್ಲವೆ? ಅಂಕಿ ಮಗ್ಗಿಗಳನ್ನು ಕೊಟ್ಟು ಬಡತನವನ್ನು ಸಿದ್ಧಮಾಡುವ ಪ್ರಸಂಗವೇ ಈಗಿಲ್ಲ. ಭಾರತವು ಇಂದು ಜಾಗೃತವಾಗಿ ಅದನ್ನು ಬೆನ್ನಟ್ಟಲು ಇಂದು ಹವಣಿಸುತ್ತದೆ. ಬಡತನಕ್ಕೆ ಭಾರತವು ತವರುಮನೆಯಾಗಿದೆ. ಅದರ ನಿವಾರಣೋಪಾಯವನ್ನು ತೀವ್ರವಾಗಿ ಕೈಕೊಳ್ಳದಿದ್ದರೆ ಭಾರತಕ್ಕೆ ಉದ್ಧಾರವಿಲ್ಲ.

**ವರ್ಗಭೇದಗಳು**—ಎಲ್ಲ ನಾಡುಗಳಂತೆ ಬಂಡವಲವಾದದ ಪದ್ಧತಿಯೇ ಇಲ್ಲಿಯೂ ಮನೆಮಾಡಿದೆ. ಇಡೀ ದೇಶವೆಲ್ಲ ರಾಜರು, ಮಹಾರಾಜರು, ಜಮೀನದಾರರು, ದೇಸಾಯರು, ದೇಶಪಾಂಡೆಯವರಿಂದ ತುಂಬಿಹೋಗಿದೆ. ಕೋಟ್ಯಾವಧಿ ಜನರು ಮನೆಮಾರುಗಳಿಲ್ಲದೆ, ಇವರ ಗುಲಾಮರಾಗಿದ್ದಾರೆ. ಭಾರತದಲ್ಲಿ ೭೦೦ ಜನ ಸಂಸ್ಥಾನಿಕರಿದ್ದಾರೆಂದ ಮೇಲೆ ಪರಿಸ್ಥಿತಿ ಏನಿದೆ ನೋಡಿರಿ. ಭಾರತದ ಮೂರನೆಯ ಒಂದು ಪಾಲು ಭೂಮಿಯು ಇವರ ವಶದಲ್ಲಿ. ದೇಸಾಯಿ, ದೇಶಪಾಂಡೆ, ಇನಾಮದಾರ, ಜಹಗೀರದಾರ ಇವರ ವಶದಲ್ಲಿರುವ ಭೂಮಿಗೂ ಲೆಕ್ಕವಿಲ್ಲ. ಅಂದ ಮೇಲೆ ಜನಾಂಗಕ್ಕೆಲ್ಲಿ ಭೂಮಿ ಉಳಿಯಬೇಕು? ಲಕ್ಷಾಂತರ ಹಳ್ಳಿಗಳಲ್ಲಿ ವಾಸಿಸುವ ಬಡರೈತರಿಗೆ ಅಡವಿಯಲ್ಲಿ ಗೇಣು ಹೊಲವಿಲ್ಲ; ಊರಲ್ಲಿ ಮನೆಯಿಲ್ಲ. ಬಹುಸಂಖ್ಯಾಕರಾದ ಜನರು ಜಮೀನದಾರರ ಒಕ್ಕಲುಗಳು. ಹೊಟ್ಟೆ ಬಟ್ಟೆಗೆ ಇಲ್ಲದವರು. ಇವರ ಶ್ರಮದ ಬಹುಭಾಗವೆಲ್ಲವೂ ಇವರ ಒಡೆಯರಿಗೆ! ಅಲ್ಲದೆ, ತಮ್ಮ ಸೇವೆಗಾಗಿಯೇ ಇವರ ಜನ್ಮವೆಂಬ ಭಾವನೆ. ಒಂದೆಡೆಗೆ ಇವರ ಚಕ್ಕಂದದ ಚಲ್ಲಾಟ ನಡೆದಿದ್ದರೆ, ಇನ್ನೊಂದೆಡೆಗೆ ಅವರ ಒಕ್ಕಲುಗಳ ಹೊಟ್ಟೆಯ ಹೋರಾಟ. ಸಂಸ್ಥಾನಿಕರ ದುಂದುಗಾರಿಕೆಯಂತೂ ಜಗತ್ಪ್ರಸಿದ್ಧವಾಗಿಯೇ ಇದೆ. ಇದೆಲ್ಲವೂ

ರೈತರ ಸುಲಿಗೆಯು ಮೇಲೆಯೇ ನಡೆದಿದೆ. ಇದಲ್ಲದೆ, ಬಡ್ಡಿಗೆ ಬಡ್ಡಿ, ಚಕ್ರ ಬಡ್ಡಿ, ಮಹಾಬಡ್ಡಿಗಳಿಂದ ಧನಿಕರಾದ ಕುಬೇರರೂ ಇಲ್ಲವೆಂದಲ್ಲ. **ಬಿರ್ಲಾ** ರಂಥ ನವಕೋಟಿ ನಾರಾಯಣರೂ ಇದ್ದಾರೆ. ಕೋಟ್ಯಾದೀಶರೂ ಇದ್ದಾರೆ. ಬಡವರ ಸುಲಿಗೆಯನ್ನು ವ್ಯವಸ್ಥಿತವಾಗಿ ಸಾಗಿಸಿದ್ದಾರೆ.

ಉಚ್ಚ ನೀಚ ಭಾವನೆಗಳು ಇಲ್ಲವೆನ್ನಬೇಕೆ! ಈ ಭಾವನೆಯು ಇಲ್ಲಿ ಬೇರೂರಿದಷ್ಟು ಜಗತ್ತಿನಲ್ಲಿ ಇನ್ನೆಲ್ಲಿಯೂ ಬೇರೂರಿಲ್ಲ. ಸಮಾಜದ ರೂಢಿ ಗಳೂ ರೋಗಗಳೂ ಎಲ್ಲವೂ ಇಂದು ಇಲ್ಲಿ ನೆಲೆಯೂರಿ ನಿಂತಿವೆ. ಜಗತ್ತಿ ನಲ್ಲಿ ಸಾಮ್ಯವಾದಕ್ಕೆ ಪ್ರಥಮ ಮರ್ಯಾದೆಯು ಎಲ್ಲಿಯಾದರೂ ದೊರೆಯ ಬೇಕಿದ್ದರೆ ಅದಕ್ಕೆ ಯೋಗ್ಯವಾದ ಸ್ಥಾನವು ಭಾರತವು.

ಧನಸಂಗ್ರಹದ ನಿಯಮಗಳು ಬೇರೆ ನಾಡುಗಳಿಗೆ ಅನ್ವಯಿಸು ವಂತೆ ಭಾರತಕ್ಕೂ ಅನ್ವಯಿಸುತ್ತವೆ. ಮತ್ತು ಸಂಗ್ರಹವನ್ನು ತಡೆ ಯುವ ರೀತಿಯು ಎಲ್ಲ ಕಡೆಗೂ ಒಂದೇ. ಇಲ್ಲಿಯ ಪರಿಸ್ಥಿತಿಯು ಸಾಮ್ಯವಾದದ ತತ್ವಗಳ ರೀತಿ ನೀತಿಗಳನ್ನು ನಿರ್ಣಯಿಸುವದರಲ್ಲಿ ನೆ ವಾಗಬಹುದು. ಆದರೆ ಆ ತತ್ವಗಳನ್ನು ಬದಲಿಸಲಾರದು. ಧನೋತ್ಪತ್ತಿ ಸಾಧನಗಳ ಒಡೆತನವು ಸುಲಿಗೆಯುನ್ನೂ ಹಣದ ಹಂಚುವಿಕೆಯ ಭೇ ವನ್ನೂ ಹೋಗಲಾಡಿಸಲು ಬೇರೆ ದೇಶಗಳಂತೆ ಇಲ್ಲಿಯೂ ಅವಶ್ಯವಿದೆ ಸಾಮ್ಯವಾದವೇ ಸದ್ಯದ ಸಾಮಾಜಿಕ ಸಮಸ್ಯೆಗಳ ಒಂದೇ ಒಂದಾ ಮತ್ತು ಅನಿವಾರ್ಯವಾದ ಪರಿಹಾರೋಪಾಯವಾಗಿದೆ.

ಈ ಬದಲಾವಣೆಗಳಾಗಬೇಕಾದರೆ, ರಾಷ್ಟ್ರದ ಕೈಯಲ್ಲಿ ಅಧಿಕಾ ಬೇಕು. ಅದಿಲ್ಲದೆ ಯಾವುದೂ ಸಾಧ್ಯವಿಲ್ಲ. ಆದುದರಿಂದ ಮೊದಲ ಸ್ವಾತಂತ್ರ್ಯ ಬೇಕು. ಇದನ್ನು ಹಿಂದೆಯೇ ನಾವು ಹೇಳಿದ್ದೇವೆ.

ಆದರೆ ಇದನ್ನೇ ಮುಂದೆ ಮಾಡಿ ಬಂಡವಲದಾರರು ಮೊದಲ ಸ್ವಾತಂತ್ರ್ಯ ಗಳಿಸಿರಿ. ಆಮೇಲೆ ಸಾಮ್ಯವಾದದ ಬಗ್ಗೆ ವಿಚಾರಿಸಬಹುದು ಎಂದು ಹೇಳುತ್ತಲಿದ್ದಾರೆ. ಇವರು ಯಾವಾಗಲೂ ಸಾಮ್ರಾಜ್ಯವಾದ ಕೊಂಕುಳ ಕೂಸು ಎಂಬುದನ್ನು ಯಾರೂ ಮರೆಯಲಾಗದು. ಭಾ ತೀಯ ಸ್ವಾತಂತ್ರ್ಯದ ಹೋರಾಟದಲ್ಲಿ ಎಷ್ಟು ಜಮೀನದಾರರು ರಾಜರು

ಮಹಾರಾಜರು ಭಾಗವಹಿಸುತ್ತಿದ್ದಾರೆ! ಎಷ್ಟು ಸಹಾಯ ಮಾಡುತ್ತಲಿದ್ದಾರೆ? ಭಾರತೀಯರ ವಶಕ್ಕೆ ಒಂದುವೇಳೆ ರಾಜಕೀಯ ಅಧಿಕಾರ ಬಂದರೆ, ತಮ್ಮ ಹಿತಸಂಬಂಧಗಳಿಗೆ ಧಕ್ಕೆ ತಗಲಬಾರದೆಂದೇ ಇವರ ದೇಶಭಕ್ತಿಗೆ ಶಿಲೆ ಒಡೆಯುತ್ತದೆ. ಆದ್ದರಿಂದಲೇ ಎಷ್ಟೋ ಮಹಾಸೀಯರು ಕಾಂಗ್ರೆಸ್ಸಿಗೆ ತಮ್ಮ ಸುಲಿಗೆಯಲ್ಲಿಯ ಕೆಲವು ಭಾಗವನ್ನು ಸಲ್ಲಿಸಿ ದೇಶಭಕ್ತರಾಗುತ್ತಾರೆ. ತಮ್ಮ ಈ ದಾನದ ಉಪಯೋಗವನ್ನು ಹೆಚ್ಚು ಹಣ ಬೆಳೆಯಿಸುವದರಲ್ಲಿ ಉಪಯೋಗಿಸಲಿಕ್ಕೂ ಅವರು ಹಿಂದೆ ಮುಂದೆ ನೋಡುವದಿಲ್ಲ. ಭಾರತೀಯ ಬಂಡವಲಗಾರರು ಕ್ರಾಂತಿಯ ರಂಗಕ್ಕಿಳಿಯಲು ಎಂದೂ ಸಿದ್ಧರಾಗುವದಿಲ್ಲ. ಇಷ್ಟೇ ಅಲ್ಲ, ಕಾಂಗ್ರೆಸ್ಸು ತಮ್ಮ ಹಿತಸಂಬಂಧಗಳನ್ನು ದುರ್ಲಕ್ಷಿಸುವದೆಂಬ ವಾಸನೆಯು ಬಡಿದೊಡನೆಯೆ ಇವರು ಕಾಂಗ್ರೆಸ್ಸಿನ ಶತ್ರುಗಳಾಗುವರು. ಟೆನನ್ಸಿ ಬಿಲ್ಲಿನ ವಿಷಯಕ್ಕೆ ಇವರು ಎಬ್ಬಿಸಿದ ಗುಲ್ಲೇ ಇದಕ್ಕೆ ಸಾಕ್ಷಿ. ಪ್ರಸಂಗ ಬಿದ್ದರೆ, ವಿರುದ್ಧ ಚಳವಳಿಯನ್ನೂ ಹೂಡುವರು. ತಮ್ಮ ಧನಬಲದಿಂದ ರಾಜ್ಯಸೂತ್ರಗಳನ್ನೂ ಕೈಯಲ್ಲಿ ಇಟ್ಟುಕೊಳ್ಳಲು ಯತ್ನಿಸುವರು. ಕಾಂಗ್ರೆಸ್ಸಿನಲ್ಲಿ ಇವರ ಪ್ರಭಾವವು ಹೆಚ್ಚಾಗಿದೆ. ಸಾಮ್ರಾಜ್ಯದೊಡನೆ ನಡೆದ ಹೋರಾಟದಲ್ಲಿ ಇವರು ಅಧಿಕಾರಲಾಲಸೆಯಿಂದ ಭಾಗವಹಿಸಲೂ ಬಹುದು. ಆದರೆ ಇವರ ಕೈಗೆ ಅಧಿಕಾರ ಸೂತ್ರಗಳು ಸೇರದಂತೆ ಜನಸಾಮಾನ್ಯರು ಜಾಗರೂಕರಾಗಬೇಕು. ಜನಸಾಮಾನ್ಯರೆ ಸಾಮ್ರಾಜ್ಯವಾದವನ್ನು ಎದುರಿಸಬಲ್ಲರು. ಅವರೇ ಸಮರ್ಥರು. ಸಾಮ್ರಾಜ್ಯವಾದವನ್ನು ವಿರೋಧಿಸುವ ತತ್ವವೇ ಈ ಬಂಡವಲದಾರರ ವಿಷಯಕ್ಕೂ ಹತ್ತುವದು. ಇಬ್ಬರೂ ಸುಲಿಗೆಗಾರರು. ಆರ್ಥಿಕ ಅಸಮಾನತೆಗೆ ಇಬ್ಬರೂ ಕಾರಣರು. ಇಬ್ಬರನ್ನೂ ಹೊಡೆದೋಡಿಸಿದಾಗಲೇ ಭಾರತಕ್ಕೆ ಮುಕ್ತಿ. ಇಲ್ಲವಾದರೆ, ಬ್ರಿಟಿಶರ ಬದಲು ಈ ಬಂಡವಲದಾರರ ಆಳಿಕೆಯಾಗಬಹುದು. ಬಡವರ ಬಡತನವು ಹಿಂಗಲಿಕ್ಕಿಲ್ಲ. ನಮ್ಮ ಸ್ವಾತಂತ್ರ್ಯ ಹೋರಾಟವೂ ಶ್ರಮವೂ ಹಾವು ಬಡಿದು ಹದ್ದಿಗೆ ಹಾಕಿದಂತಾದೀತು. ಆದುದರಿಂದಲೇ ಜನಾಂಗಕ್ಕೆ, ಕಾಂಗ್ರೆಸ್ಸ ಕಾರ್ಯಕರ್ತರಿಗೆ ಎಚ್ಚರಿಕೆ ಕೊಡುವದು ಅವಶ್ಯವಿದೆ. ನಾವು ರಾಷ್ಟ್ರದ ಸ್ವಾತಂತ್ರ್ಯದೊಡನೆ ಜನಾಂಗವನ್ನು ಆರ್ಥಿಕ

ಸ್ವಾತಂತ್ರ್ಯದಿಂದಲೂ ಮುಕ್ತವಾಗಬೇಕಾಗಿದೆ ಎಂಬುವನ್ನು ಮುಂದಿಟ್ಟು ಕೊಂಡೇ ನಾವು ಮುಂದಕ್ಕೆ ಸಾಗಬೇಕಾಗಿದೆ. ಎಲ್ಲರನ್ನು ಎಲ್ಲಬಗೆಯ ದಾಸ್ಯದಿಂದ ಮುಕ್ತಮಾಡುವದೇ ಸಾಮ್ಯವಾದವು. ಎಲ್ಲ ಬಗೆಯ ಪರ ತಂತ್ರಗಳಿಂದ ನರಳುತ್ತಿರುವ ಭಾರತವು ಸಾಮ್ಯವಾದಕ್ಕೆ ಯೋಗ್ಯವಲ್ಲ ವೆಂದರೆ ಇನ್ನಾವ ದೇಶವೂ ಜಗತ್ತಿನಲ್ಲಿ ಯೋಗ್ಯವಿಲ್ಲ.

ಇನ್ನು ಸಂಸ್ಕೃತಿಯ ಮಾತು. ನಮಗೆ ತಿಳಿದ ಮಟ್ಟಿಗೆ ಭಾರತೀ ಯರ ಸಂಸ್ಕಾರಗಳು ಸಾಮ್ಯವಾದವನ್ನು ವಿರೋಧಿಸುವದಿಲ್ಲ. ಉಪ- ಜೀವನದ ಸಾಧನ ಮತ್ತು ಸೌಕರ್ಯಗಳನ್ನು ಎಲ್ಲರಿಗೂ ಒದಗಿಸಿ ಕೊಡಲು, ಸಮನಾಗಿ ಹಂಚಲು ಅದು ವಿರುದ್ಧವಾಗಿಲ್ಲ. ವ್ಯಷ್ಟಿವಾದವೇ ಮುಖ್ಯವಾದ ನಮ್ಮ ನಾಗರಿಕತೆಯು ಸಾಮ್ಯವಾದವನ್ನು ಸ್ವಾಗತಿಸ ಲಾರದೆಂದು ಹೇಳಲ್ಪಡುತ್ತದೆ. ಈ ಸಮಸ್ಯೆಯನ್ನು ಈ ರೀತಿ ಮಂಡಿಸು ವದೆಂದರೆ, ಎರಡೂ ಧ್ಯೇಯಗಳ ಸ್ಪಷ್ಟವಾದ ಕಲ್ಪನೆಯಿಲ್ಲವೆಂದೇ ಅರ್ಥ. ವ್ಯಕ್ತಿಯ ಪೂರ್ಣತೆಯೇ ವ್ಯಷ್ಟಿವಾದದ ಮತಿತಾರ್ಥ. ಆದರೆ ಅನರ್ಥದ ಮೂಲವಾದ ಸ್ವಾರ್ಥಸಾಧನೆಯು ಇದರ ಗುರಿಯಲ್ಲ. ವ್ಯಕ್ತಿಪೂರ್ಣ ತೆಯ ಗುರಿಯನ್ನು ಸಾಮ್ಯವಾದವು ಸ್ವಾಗತಿಸುತ್ತದೆ. ಯಾಕಂದರೆ, ವ್ಯಕ್ತಿಯು ಸಮಾಜದ ಒಂದು ಘಟಕ. ಆತ್ಯಂತಿಕ ಸಮಾಜದ ಸಾರ್ವ ಜನಿಕ ಹಿತದ ಸಾಧನೆಯಿಂದಲೇ ಅದು ಕೈಗೂಡುವದೆಂದು ಸಾಮ್ಯವಾ ದಿಯ ನಂಬಿಗೆ. ಸಾಮ್ಯವಾದೀ ಸಮಾಜದಲ್ಲಿಯೇ ಮಹಾತ್ಮರ ಅಪರಿ ಗ್ರಹ ವ್ರತವು ಪೂರ್ಣವಾಗಿ ಪಾಲಿಸಲ್ಪಡುವದೆಂದೂ ಅಂದೇ ದರಿದ್ರ ನಾರಾಯಣನು ತೃಪ್ತನಾಗುತ್ತಾನೆಂದೂ ನಮಗೆ ಅನಿಸುತ್ತದೆ. ಈ ಆದರ್ಶ ಜೀವನವು ಮಾನವ ವರ್ಗಕ್ಕೆಲ್ಲ ಮಹಾತ್ಮರ ಯೋಗ್ಯತೆಗೆ ಮುಟ್ಟಿಸುವ ಯೋಗ್ಯ ಸಾಧನವಾಗುವದೆಂದು ನಮಗೆ ಅನಿಸುತ್ತದೆ. ಅದನ್ನೇ ಟ್ರಾಟಸ್ಕಿಯೂ ಒಂದೆಡೆಯಲ್ಲಿ ಪ್ರತಿಪಾದಿಸಿದ್ದಾನೆ. ಆದ್ದರಿಂದ ಭಾರತೀಯ ಸಂಸ್ಕೃತಿಯು ಸಾಮ್ಯವಾದಕ್ಕೆ ವಿರೋಧವಾಗಿರದೆ ಅನು ಕೂಲವೇ ಆಗಿರುತ್ತದೆ.

ಘನತೆಹೊಂದಿದ ಭಾರತದ ನಿರ್ಮಾಣವಾಗಬೇಕೆಂಬ ಹಂಬಲವುಳ್ಳ

ವರು ಈ ಯೋಜನೆಗಳ ಮೇರೆಗೆ, ಕಾರ್ಯ ನಡೆಯಿಸಿದರೆ ಇಷ್ಟಸಿದ್ಧಿಯಾಗುವದು. ಈ ಜಗತ್ಪ್ರಸಿದ್ಧವಾದ ನಾಡಿನಿಂದ ಪಾರತಂತ್ರ್ಯ, ಆಲಸ್ಯ, ಅಜ್ಞಾನ, ಅನ್ಯಾಯ, ದಾರಿದ್ರ್ಯ, ಮಲಿನತೆ ಮುಂತಾದವುಗಳು ಹೊರಟು ಹೋಗಬೇಕಾದರೆ **ಸಾಮ್ಯವಾದವೊಂದೇ ಉಪಾಯವು.**

**ವಂದೇಮಾತರಂ**

# ಒಪ್ಪೋಲೆ

| ಪುಟ | ಸಾಲು | ತಪ್ಪು | ತಿದ್ದುಪಡೆ |
|---|---|---|---|
| ೮ | ೧೭ | ಸ್ಟರ್ಧೆ | ಸ್ಪರ್ಧೆ |
| ೧೯ | ೭ | ಸಿದ್ದವಾದ | ಸಿದ್ಧವಾದ |
| ೩೦ | ೨೫ | ಬಂಡವಲಪಾದದ | ಬಂಡವಲವಾದದಿಂದ |
| ೨೭ | ೧೮ | ಯಂ್ರ | ಯಂತ್ರ |
| ,, | ೨೦ | ಆವನಿಗೆ | ಅವನಿಗೆ |
| ೩೦ | ೧೪ | ಹೆಕ್ಕಿನದು | ಹಕ್ಕಿನದು |
| ೩೧ | ೨೫ | onership | ownership |
| ೩೨ | ೧೪ | ಹಬ್ಬಿಸುವವರಿಂದ | ಹುಟ್ಟಿಸುವವರಿಂದ |
| ೪೨ | ೮ | ಕಳೆದುಕೊಂಡು | ಸೆಳೆದುಕೊಂಡು |
| ೫೪ | ೧೩ | Family | Faulty |
| ೫೭ | ೧೯ | ಮಾಡುವದೂಯಿಲ್ಲ | ಮಾಡುವದಿಲ್ಲ |
| ೮೫ | ೧೭ | Communic | Communism |
| ೧೦೫ | ೩ | ತೆರೆಯುಲ್ಪಟ್ಟರುತ್ತವೆ | ತೆರೆಯಲ್ಪಡುವವು |
| ೪೨೦ | ೬ | of | to |

# ಮಿಂಚಿನಬಳ್ಳಿಯ ಸಹಾಯಕರು

೧೯೩೮

## ಸಹಾಯಕರು

| | | |
|---|---|---|
| ಶ್ರೀ. ಪೇಜಾವರ ಮಠದ ಶ್ರೀಗಳು | ಉಡುಪಿ | ೧೦-೦-೦ |
| ,, ಗಂಗಾಧರರಾವ ದೇಶಪಾಂಡೆ | ಬೆಳಗಾವಿ | ೧೦-೦-೦ |
| ,, ಎಮ್. ಗೋವರ್ಧನರಾವ | ಧಾರವಾಡ | ೧೦-೦-೦ |

## ಹಿತಚಿಂತಕರು

| | | |
|---|---|---|
| ಶ್ರೀ. ಮೋಹನರಾವ ಕರಿಕಟ್ಟಿ | ಬದಾಮಿ | ೫-೦-೦ |
| ,, ಆರ್. ವ್ಹಿ. ಜಹಗೀರದಾರ | ಧಾರವಾಡ | ೫-೦-೦ |
| ,, ಶಿವಬಸಪ್ಪ ಬೆಟಗೇರಿ | ,, | ೫-೦-೦ |
| ,, ಶ್ರೀಧರಪಂತ ಖಾನೋಳಕರ | ಪೂನಾ | ೫-೦-೦ |
| ,, ಬಳವಂತರಾವ ಬೆಂಗಳೂರ | ನವಲಗುಂದ | ೫-೦-೦ |
| ,, ಅನಂತರಾವ ಜಾಲೀಹಾಳ | ಗದಗ | ೫-೦-೦ |
| ,, ವಿಶ್ವನಾಥರಾವ ಜೋಗ | ಧಾರವಾಡ | ೫-೦-೦ |
| ,, ಗೋವಿಂದಾಚಾರ್ಯ ಗುತ್ತಲ | ,, | ೫-೦-೦ |
| ,, ವಿಠ್ಠಲರಾವ ಜಮಖಂಡಿ | ,, | ೫-೦-೦ |
| ,, ತಟ್ಟಿ ಕೃಷ್ಣರಾವ | ಹೊಸಪೇಟೆ | ೫-೦-೦ |
| ,, ಎನ್. ಎಂ. ಕಿಣಿ | ಶಿಗ್ಗಾವಿ | ೫-೦-೦ |
| ,, ಮಾಧವರಾವ ಅನಂತರಾವ ಪಾಟೀಲ | ,, | ೫-೦-೦ |
| ,, ಎ. ಎ. ಕುಲಕರ್ಣಿ | ,, | ೫-೦-೦ |
| ,, ವ್ಹಿ. ಕೆ. ಅಯ್ಯರ | ,, | ೫-೦-೦ |
| ,, ವ್ಹಿ. ಎನ್. ಕುಲಕರ್ಣಿ | ಪೂನಾ | ೫-೦-೦ |
| ,, ಪಿ. ರಾಘವೇಂದ್ರರಾವ | ಮುಂಬಯಿ | ೫-೦-೦ |
| ,, ವ್ಹಿ. ಎನ್. ಕೊಣ್ಣೂರ | ಪೂನಾ | ೫-೦-೦ |
| ,, ಆರ್. ಪಿ. ಭಾಗವತ | ಬಾಗೇವಾಡಿ | ೫-೦-೦ |
| ,, ಕೆ. ರಾಮಕೃಷ್ಣರಾವ | ವಿಜಾಪೂರ | ೫-೦-೦ |

# ದಿ ಯುನಾಯಿಟೆಡ್
# ಕರ್ನಾಟಕ ಇನ್ಸ್ಸುರೆನ್ಸ್ ಕಂಪನಿ. ಲಿ.

ಪ್ರಧಾನ ಕಾರ್ಯಾಲಯ—ಧಾರವಾಡ



ಕಂಪನಿಯು ಸುಮಾರು ೭೦೦ ಜನ ಯುವಕರಿಗೆ
ಉದ್ಯೋಗವನ್ನು ಕಲ್ಪಿಸಿದೆ.

**ಈಗಾಗಲೇ ಸರಕಾರದ ಆಧಾರಪತ್ರಗಳಲ್ಲಿ ತೊಡಗಿಸಿದ ಹಣ ೫೮೦೦೦ ರೂಪಾಯಿಗಳಿಗೆ ಮಿಕ್ಕಿ.**

ಈ ವರ್ಷದ ಕೊನೆಗೆ ೧೨೦೦೦೦೦ ರೂಪಾಯಿಗಳಿಗೆ
ಮಿಕ್ಕಿದ ವಿಮಾ ಕಾರ್ಯವಾಗಿದೆ.

**ಕನ್ನಡಿಗರ ಅಭಿಮಾನದ ಸಂಸ್ಥೆ**

**ಭರದಿಂದ ಬೆಳೆಯುತ್ತಿರುವ ವಿಮಾ ಕಂಪನಿ.**

ಲಾಭದಾಯಕ ಕಮೀಶನ್ ಕರಾರುಗಳು. ವ್ಯವಹಾರ ಕುಶಲರೂ ಉತ್ಸಾಹಿಗಳೂ ಆದ ಏಜಂಟರು ಬೇಕು.

ವಿಶೇಷ ವಿವರಕ್ಕೆ ಬರೆಯುವದು.

**ಎಂ. ಗೋವರ್ಧನರಾವ್,**
ಮ್ಯಾನೇಜರ,
ಯು. ಕ. ಇ. ಕಂ. ಲಿ. ಧಾರವಾಡ.